


ಸಂಪುಟ ೧೧ ಡಿಸೆಂಬರ್ ೧೯೫೨ ಸಂಚಿಕೆ ೯

# ಕುಹಕಿಡಿಗಳು

ಸಾಂಸ್ಕೃತಿಕ ಸಂಘಗಳಿಗೆ ಹೇಗೆ ಹಣ ಒದಗಿಸಬೇಕು, ಎಂದು ಕಂಡುಹಿಡಿಯಲು ಸರ್ಕಾರವು ಹತ್ತುಸಾವಿರ ರೂಪಾಯಿ ಅಂದಾಜು ಖರ್ಚು ಮಾಡಿದೆಯಂತೆ.

—ಸಾಂಸ್ಕೃತಿಕ ಸಂಘಗಳು ಸರ್ಕಾರದಿಂದ ಹೇಗೆ ಹಣ ಗಿಟ್ಟಿಸಬೇಕು ಎಂದು ಕಂಡು ಹಿಡಿಯಲು ಹತ್ತುಸಾವಿರ ರೂಪಾಯಿಗಳನ್ನು ಅಂದಾಜು ಖರ್ಚು ಮಾಡಿದೆಯಂತೆ.

* * * *

ಮಿತ ಸಂತಾನ ಯೋಜನೆಗೆ ಮಠಾಧಿಪತಿಗಳ ಬೆಂಬಲ. (ಪತ್ರಿಕೆ)

—ಆಹ್ಹಾ !!

* * *

ಗಾಂಧಿ ಜಯಂತಿಯ ದಿನ ನಮ್ಮ ಗೀತಾ ಸಂಘದವರು ನೂತ ನೂಲು;

—ನಮ್ಮ ಅಧ್ಯಕ್ಷರ ಉಡಿದಾರಕ್ಕೆ ಸಾಕಾಯ್ತು. (ವರದಿ)

* * *

ಹೈದರಾಬಾದಿನ ಪ್ರಜಾ ಸಭೆಯಲ್ಲಿ ಭಾಷಾ ಬಿಕ್ಕಟ್ಟು ತಲೆದೋರಿತಂತೆ ತೆಲುಗೇ ಮಹಾರಾಷ್ಟ್ರವೇ ಅಂತ—

—ಕಡೆಗೆ ನಮ್ಮ ಸ್ಥಿತಿಗೆ ಉರ್ದುವೇ ಸರಿ ಎಂದು ನಿರ್ಣಯಿಸಿದರು ಎನ್ನುವುದು ಸುಳ್ಳಂತೆ.

*  *  *

"ರಾತ್ರಿಹೊತ್ತು ಮಂಗ ಆಗುವ ಮನುಷ್ಯ" (ಪತ್ರಿಕೆಯ ಲೇಖನ)

—ಯಾಕೆ! ಸುಮಾರು ಎಲ್ಲರೂ ಹಾಗೇ ಅಲ್ಲವೇ?

*  *  *

ನಮ್ಮ ಸಾಹಿತ್ಯ ಮಂಟಪದಲ್ಲಿ "ಈ ಸಾರಿ ನಡೆಸುವ ಸ್ವಾತಂತ್ರ ದಿನಾಚರಣೆಗೆ ಜಪಾನಿನಿಂದ ರಾಷ್ಟ್ರಧ್ವಜಗಳನ್ನು ತರೆಸಬೇಕೋ! ಇಂಗ್ಲೆಂಡಿನಿಂದಲೋ" ಅಂತ ಸಮಸ್ಯೆ ಹುಟ್ಟಿದೆ.

*  *  *

ವರಮಾನ ತೆರಿಗೆ ಅಧಿಕಾರಿಗಳು ಚಿಲ್ಲರೆ ಲೆಕ್ಕಕ್ಕೆ ಕೈ ಹಾಕುಲ್ಲ.

—ವರಮಾನ ತೆರಿಗೆ ಅಧಿಕಾರಿಗಳು ಹೊಕ್ಕಮೇಲೆ ಚಿಲ್ಲರೆ ಎಲ್ಲಿ ಉಳಿಯುತ್ತೆ!

*  *

"ಈ ಕಿಸ್‌ಮಿಸ್ ಹಬ್ಬಾನಾ ಛಳಿಗಾಲದಲ್ಲಿ ಏರ್ಪಡಿಸಿದವರು ಯಾಕ್ಹಾರೂ ಹಾಗೆ ಮಾಡಿದರೊ" ಎಂದೊಂದು ಹಸುಳೆ ಕಾಗದ ಬರೆದಿದೆ.

*  *  *

ತಲಕಾಡು ಯಾತ್ರೇಲಿ ಇಡಲಿ ಖರ್ಚಾದುದನ್ನು ನೋಡಿದ ಉಡುಪಿಯವನು ಕಾಂಚಿಪುರದ ಸಂತೆಗೆ ಉಪ್ಪಿಟ್ಟು ಮಾರಲು ಯತ್ನಿಸಿದನಂತೆ.

*  *  *

ಪ್ರಾಂತೀಯ ಭಾವನೆ ಹೆಚ್ಚಾಗಿರುವುದು ಕೇಂದ್ರದವರಿಗೆ ತಲೆನೋವಾಗಿದೆಯಂತೆ.

—ಮೈಸೂರಿನಲ್ಲಿ ಕನ್ನಡಿಗರಲ್ಲದ ಅಧಿಕಾರಿಗಳ ಸಂಖ್ಯೆಯೇ ಹೆಚ್ಚಾಗಿರುವುದು ಕೇಂದ್ರಕ್ಕೆ ಶಾಂತಿಕೊಡಬೇಕಲ್ಲವೇ.

*  *  *

ಮದ್ರಾಸಿನ ನೌಕರರಿಗೆ ಶೇಕಡಾ ಹತ್ತರಷ್ಟು ಸಂಬಳ ಖೋತಾ ಅಂದಿದ್ದನ್ನು ನಮ್ಮ ನೌಕರರು ಕೇಳಿದಾಗ ಅಂದರು. "ತೋಳನಿಗೆ ಕುರಿಕಾಯುವ ಸಂಬಳದಲ್ಲಿ ಖೋತಾ ಮಾಡಿದಹಾಗೆ" ಅಂತ.

—o—

# ಉರಿಗಾಳು

'ಐಶ್ವರ್ಯವಂತರಿಗೇ ಒಂದು ಕಾನೂನು, ಬಡವರಿಗೇ ಒಂದು ಕಾನೂನು'
(ಭಾಷಣ)

—ಹೌದು! ಆದರೆ ಮಧ್ಯಮ ವರ್ಗದವರಿಗೆ ಮುನ್ನೂರು ಕಾನೂನು!!

* * *

ಬೇನೆ ಬಂತು ಅಂತ ಹೇಳಿಕಳಿಸಿದ ಎರಡೇ ನಿಮಿಷದಲ್ಲಿ ಸಿದ್ಧಳಾಗಿ ಬಂದ ಸೂಲಗಿತ್ತಿಯನ್ನು ನೋಡಿ ಬೆಚ್ಚಬೆರಗಾದ ಗರ್ಭಿಣಿಯು ಇನ್ನೆರಡೇ ನಿಮಿಷದಲ್ಲಿ ನಿರಾಯಾಸವಾಗಿ ಹೆತ್ತಳಂತೆ.

* * *

ವಿದ್ಯಾಭ್ಯಾಸದ ಮಾರ್ಪಾಡುಗಳಲ್ಲಿ ವೃತ್ತಿಶಿಕ್ಷಣ, ಕೈ ಕೆಲಸಕ್ಕೆ ಪ್ರಾಧಾನ್ಯ ಕೊಡುವುದರಿಂದ, ಇನ್ನು ಮುಂದೆ ಹುಡುಗರು ಮನೆಗಳಲ್ಲಿ ಓದುತ್ತಾರೆಂದು ನಂಬ ಬಹುದು ಅಲ್ಲವೇ?

* * *

ರಾತ್ರಿ 'ಮಂಗ' ನಾಗುವವನು ನಮ್ಮ ಪುಣ್ಯಕ್ಕೆ ಲಂಡನ್ನಿನಲ್ಲಿದ್ದಾನೆ.

—ಇಲ್ಲಿ ಇದ್ದಿದ್ದರೆ!! ಆಂಜನೇಯನ ಅವತಾರ ಅಂತ ಅವನಿಗೆ ಗುಡಿಕಟ್ಟಿಸಿ, ಕೂರಿಸಿ ಹಾರಲಾರದ ಹಾಗೆ ಹೊಟ್ಟೆಗೆ ಹಾಕುತ್ತಿದ್ದರು ಅಲ್ಲವೇ?

* * *

ನಮ್ಮ ಮಗಳು ಆರು ದಿನದಿಂದ ಏನೂ ತಿಂದೇ ಇಲ್ಲ. ಏನು ಕುಡಿದರೂ ವಾಂತಿ ಮಾಡುತ್ತಾಳೆ–ಆದರೂ ದಪ್ಪನಾಗುತ್ತಿದ್ದಾಳೆ. (ಹೇಳಿಕೆ)

—ಓಹೋ! ಇನ್ನೊಂದು ಕೊಡಗಿನ ಧನಲಕ್ಷ್ಮಿ.

* * *

ಹತ್ತು ಜನ ಒಟ್ಟಿಗೆ ಪಿಸುಗುಟ್ಟುತ್ತಿದ್ದರೆ, ನನಗೆ ಯೋಚನೆಮಾಡಲು ಬಲು ಅನುಕೂಲ. (ವಿಜ್ಞಾನಿಯ ಹೇಳಿಕೆ)

—ನಮ್ಮ ಕಾರ್ಯಕಾರಿ ಸಮಿತಿಯಲ್ಲಿ ಈ ವಿಜ್ಞಾನಿ ಪ್ರಯೋಗಗಳನ್ನು ನಡೆಸಿದರೆ ಪ್ರಯೋಜನವಾಗಬಹುದು!!

*                    *                    *

ಪಾಕಿಸ್ಥಾನ ಸಭೆಯಲ್ಲಿ "ಹಿಂದುಗಳಿಗೆ ಸುರಕ್ಷಣೆ ಇಲ್ಲ" ಎಂದು ಸುಹ್ರವಾದಿ ಆಪಾದಿಸಿದ್ದಾರಂತೆ.

—ಅಂದರೆ ಭಾರತಕ್ಕೆ ಹಿಂತಿರುಗುವವರ ಪೈಕಿ ಸುಹ್ರವಾದಿಯವರೇ ಮೊದಲಿಗರಾಗಬಹುದು ಅಲ್ಲವೇ?

*                    *                    *

ಕೆನ್ಯಾದಲ್ಲಿ ಪೋಲೀಸರ ವಿನಾಶಕಾರ್ಯವು ಜಲಿಯನ್‌ವಾಲಾಬಾಗಿಗಿಂತ ಹೀನವಾದುದು. (ಹೇಳಿಕೆ.)

ಓಹೊ! ಓಡ್ವೈಯರ ಇನ್ನೂ ಇದ್ದಾನೆ!!

*                    *                    *

ಗೀತಾ ಜಯಂತಿ ಅಂತ ಹೋದರೆ, ಅಲ್ಲಿ ನಡೆದ ಕಾರ್ಯಕ್ರಮನೋಡಿದ ಮೇಲೆ ಇದು ಗೀತಾ ಜಯಂತಿಯೇ? ಸಂಗೀತಾ ಜಯಂತಿಯೇ? ಎಂದು ಅನುಮಾನ ಬಂತಂತೆ.

*                    *                    *

ಮೂರು ಹಿರಿಯ ಮೈಸೂರು ಕೇಂದ್ರಗಳಲ್ಲಿಯೂ ರೇಷನ್ ಏರ್ಪಾಡು ಮುಂದುವರೆಯುತ್ತೆ ಎಂಬುದನ್ನು ಕೇಳಿ ನಮ್ಮ ಕಾಳಸಂತೆಯವರು, ದೇವರಿಗೆ ತೆಂಗಿನಕಾಯಿ ಒಡೆದರಂತೆ.

*                    *                    *

ಚರ್ಚಿಲ್ಲರಿಗೆ ಈಗ ಕಿವುಡು ಹೆಚ್ಚಾಗಿದೆಯಂತೆ.

ಚರ್ಚಿಲ್ಲರು ಕಾಮನ್‌ವೆಲ್ತ್ ಪ್ರಧಾನಾಮಾತ್ಯರ ಸಭೆಯ ಅಧ್ಯಕ್ಷರಂತೆ.

—ಪಕ್ಕ ಪಕ್ಕದ ಸುದ್ದಿಗಳು. ಟೀಕೆ ಬೇಡ ಅಲ್ಲವೇ?

*                    *                    *

ಸಿಲೋನಿನ ಸೇನಾನಾಯಕರು ದೆಹಲಿಗೆ ಮಾತುಕತೆಗಾಗಿ ಬರುತ್ತಾರೆ—

—ಬಂದಾಗ ನಮ್ಮ ಸೇನಾನಾಯಕರನ್ನು ಭೇಟಿಮಾಡುವುದಿಲ್ಲವಂತೆ.

—o—

# ಗುಜ್ಜಾರಿ ಗಂಗು

ಗುಜ್ಜಾರಿಗಂಗು ತಂದೆ ತಾಯಿಗಳಿಗೆ ಒಬ್ಬನೇ ಮಗ. ಕುಳ್ಳಾದರೂ ತೂಕ ಕಡಿಮೆ ಇಲ್ಲ. ಕಪ್ಪಾದರೂ ಕಳೆಯಿತ್ತು. ಬೇಗ ಬೇಗ ನಡೆದರೆ ಆಲೂಗಡ್ಡೆ ಉರುಳಿದ ಹಾಗೇ ಇರೋದು. ಇವನಿಗೆ ಇಪ್ಪತ್ತೊಂದನೆ ಹುಟ್ಟಿದ ಹಬ್ಬಕ್ಕೆ ತಂದೆ ತಾಯಿಗಳು, ಬೆಲ್ಲದ ಕಂಪೆನಿಯ ಸಾವಿರ ಷೇರುಗಳನ್ನು ಮಗನ ಹೆಸರಿಗೆ ಬರೆಸಿಕೊಟ್ಟರು.

ಅದಾದ ಒಂದು ತಿಂಗಳಿಗೆ ಬೆಲ್ಲದ ಕಂಪೆನಿಯ ವಾರ್ಷಿಕ. ಸಾವಿರ ಷೇರಿಗೆ ಸಾವಿರ ರೂಪಾಯಿ ಲಾಭ ಅಂತ ಲೆಕ್ಕ ಒಪ್ಪಿಸಿದರು.

ಗುಜ್ಜಾರಿ ಗಂಗು ಲೆಕ್ಕಹಾಕಿದ. ಸಾವಿರ ರೂಪಾಯಿಗಳನ್ನೂ ತೆಗೆದುಕೊಂಡು ಅಂಗಡಿಬೀದೀಗೆ ಹೋಗಿ.

ಐವತ್ತು ರೂಪಾಯಿಗೆ ಒಂದು ಕಲಾಪತ್ತಿನ ಪಂಚೆ,
ಐವತ್ತು ರೂಪಾಯಿಗೆ ಒಂದು ಲಾಲಿಮ್ಲಿ ಅಂಗಿ.
ಇನ್ನೂರು ರೂಪಾಯಿಗೆ ಒಂದು ಬೈಸಿಕಲ್.
ಮುನ್ನೂರು ರೂಪಾಯಿಗೆ ಒಂದು ವಜ್ರದ ಉಂಗುರ.
ನಾನ್ನೂರು ರೂಪಾಯಿಗೆ ಬೆಳ್ಳಿ ಊಟದ ಸಾಮಾನು.

ಹೀಗೆ ತನಗೆ ಬೇಕಾದುದನ್ನೆಲ್ಲಾ ತಂದುಬಿಡೋದು ಅಂತಂದುಕೊಂಡ.

* * *

ಬೆಲ್ಲದ ಕಂಪೆನಿಯ ಸಿಹಿ ಲೆಕ್ಕದಂತೆಯೇ ಅವರು ಸಾವಿರ ರೂಪಾಯಿನ ಡಿವಿಡೆಂಡ್ ಪತ್ರ ಕಳಿಸಲು ಹದಿನೈದು ದಿನಗಳಾದುವು.

ಅಷ್ಟು ಹೊತ್ತಿಗೆ ಆಗಲೇ ಪೌರಸಭಾ ಕಚೇರಿಯಿಂದ, ಸ್ಥಳೀಯ ಸರ್ಕಾರದಿಂದ, ಪ್ರಾಂತೀಯ ಸರ್ಕಾರದಿಂದ, ಕೇಂದ್ರ ಸರ್ಕಾರದಿಂದ ವಿಶ್ವ ಸಂಸ್ಥೆಯಿಂದ ಉದ್ದುದ್ದಾನೇ ಕಾಗದಗಳು ಬರಹತ್ತಿದುವು.

ಪೌರಸಭಾ ಕಛೇರಿಯವರು ಒಂದು ಮಾಸಲು ಮನಿಆರ್ಡರ್ ಫಾರಂನಂತಹ ಕಾಗದದ ಮೇಲೆ, "ನಿಮ್ಮ ವರಮಾನಕ್ಕೆ ಬೆಲ್ಲವೇಕಾರಣ ಆಗಿದ್ದರಿಂದ, ಆ ಬೆಲ್ಲದ ವ್ಯಾಪಾರದ ಮೇಲೆ ಈಗ ನಾವು ಸುಂಕ ಹಾಕಿರುವುದರಿಂದ, ಆ ಬಾಬ್ತು ನಿಮ್ಮ ಕಂಪೆನಿಯಿಂದ ನಮಗೆ ಹಣ ಈ ವರ್ಷ ಸೆಳೆಯೋಹಾಗಿಲ್ಲದುದರಿಂದ, ನೀವೇ ಆ ಮೊಬಲಗಾದ ಐವತ್ತನ್ನು ನಮಗೆ ಕೂಡಲೇ ಪಾವತಿಮಾಡಿ ಇಲ್ಲದಿದ್ದರೆ ನಿಮ್ಮಮೇಲೆ ನ್ಯಾಯಸ್ಥಾನದಲ್ಲಿ ಮೊಕದ್ದಮೆ ಹೂಡುತ್ತೇವೆ" ಅಂತ ನಮ್ರವಾಗಿ ಬರೆದಿದ್ದರು.

ಕಲಾಪತ್ತಿನ ಪಂಚೆ ಹೋಯ್ತು ಅಂದ ಗುಜ್ಜಾರಿ ಗಂಗು.

* * *

ಸ್ಥಳೀಯ ಸರ್ಕಾರದ ಕಾಗದ ಇನ್ನೂ ಮುಗಮ್ಮಾಗಿತ್ತು. ಬೆಲ್ಲದವ್ಯಾಪಾರ ಈಗ ಸ್ಥಳೀಯ ಸರ್ಕಾರದ ಜವಾಬ್ದಾರಿ. ಮೊನ್ನೆ ನಡೆದ ಸಭೆಯಲ್ಲಿ ಹೊಸ 'ಸೆಸ್'

ಹಾಕಿದೆ. ನಿಮ್ಮ ಡಿವಿಡೆಂಡ್‌ಗೆ ಸ್ಥಳೀಯ ಸರ್ಕಾರದ ಸೆಸ್ ರೂ. ೫೦ ಆಗಿದೆ ಕೂಡಲೆ ರವಾನಿಸಿ, ರಸೀತಿ ಪಡೆದು ಹುಷಾರಾಗಿಟ್ಟುಕೊಳ್ಳಿ.

ಲಾಲಿಮ್ಲಿ ಅಂಗಿ ಆಟ ಆಯಿತು ಅಂದ ಗುಜ್ಜಾರಿ ಗಂಗು.

* * *

ಪ್ರಾಂತೀಯ ಸರ್ಕಾರದಿಂದ ಎರಡು ಹಾಳೆಯ ಕಾಗದ. ಅಂತರ್ ಪ್ರಾಂತೀಯ ವಾಗಿ ಬೆಲ್ಲದ ವ್ಯಾಪಾರಕ್ಕೆ ತೆರಿಗೆ ಹಾಕಿದೆ. ಬೆಲ್ಲದ ಕಂಪೆನಿ ಅಂತರ್ ಪ್ರಾಂತೀಯ ವ್ಯಾಪಾರಮಾಡಿ ಲಾಭಗಳಿಸಿದೆ. ಈ ವರ್ಷ ಕಾನೂನು ವಿಳಂಬವಾಗಿದ್ದರಿಂದ ಕಂಪೆನಿಯಿಂದ ನೇರ ತೆರಿಗೆ ವಸೂಲ್ಮಾಡಲಿಲ್ಲ. ಕಾರಣ ನೀವು ಆ ನಿಮ್ಮ ಭಾಗದ ತೆರಿಗೆಯಾದ ಇನ್ನೂರು ರೂಪಾಯಿಗಳನ್ನು, ಕೂಡಲೇ ಟ್ರೆಷರಿಗೆ ರವಾನಿಸಿ, ರಸೀತಿಯ ಒಂದು ಪ್ರತಿಯನ್ನು ನಮಗೆ ಕಳಿಸಿ. ಸ್ಟಾಂಪು ಹಚ್ಚಿದ ಕವರಿನಲ್ಲಿಟ್ಟು ಕಳಿಸಿ ಎಂದು ಷರಾ ಸೂಚಿಸಿದ್ದರು.

ಬೈಸಿಕಲ್ ಆಶೆ ಮುಗಿಯಿತು ಅಂದ ಗುಜ್ಜಾರಿ ಗಂಗು.

* * *

ಕೇಂದ್ರ ಸರ್ಕಾರದ ಕಾಗದ ಬಲು ಚುರುಕು. ನಾಲ್ಕು ಹಾಳೆಯ ಕಾಗದ. ಕೇಂದ್ರ ಬೆಲ್ಲದ ತೆರಿಗೆ ನನ್ನ ಭಾಗಕ್ಕೆ ಮುನ್ನೂರು. ಅದನ್ನು ಎರಡು ಕಂತುಗಳಲ್ಲಿ ಅರ್ಧ ದಿವಸದಲ್ಲಿ ಯಾವ ಅಂಚೆ ಕಛೇರಿಯಲ್ಲಾದರೂ ಕಟ್ಟಿ ರಸೀತಿ ಪಡೆದು ತಂತಿ ಮೂಲಕ ತಿಳಿಸಬೇಕು.

ವಜ್ರದ ಉಂಗುರ 'ಮುಂದಿನ ಜನ್ಮಕ್ಕೆ ಅಂದ ಗುಜ್ಜಾರಿ ಗಂಗು.

* • * *

ವಿಶ್ವ ಸಂಸ್ಥೆಯ ಕಾಗದ ಬಲು ನಾಜೂಕಾಗಿತ್ತು. ವಿಶ್ವದ ಮೂಲೆ ಮೂಲೆ ಯಲ್ಲೂ ಎಲ್ಲ ಮನುಜರಬಾಯಿ ಸಿಹಿ ಮಾಡುವುದೇ ನಮ್ಮ ಕರ್ತವ್ಯ ಅಂದ ಮೇಲೆ ಬೆಲ್ಲದ ಹೆಸರು ಹೇಳಿದವರೆಲ್ಲಾ ನಮಗೆ ಸಹಾಯ ನೀಡಬೇಕು. ಕಾನೂನಿನ ಪ್ರಕಾರ ನೀವು ಕೊಡಬೇಕಾದ ಧರ್ಮ ನಾಲ್ಕುನೂರು ರೂಪಾಯಿ. ನಮ್ಮ ಏಜಂಟರು ನಿಮ್ಮಲ್ಲಿಗೆ ಬಂದು ಖುದ್ದಾಗಿ ನಿಮ್ಮ ಧರ್ಮವನ್ನು ಸ್ವೀಕರಿಸಿ, ನಿಮ್ಮನ್ನು ಅಭಿನಂದಿಸುತ್ತಾರೆ.

ಬೆಳ್ಳಿ ಊಟದ ಸಾಮಾನಿನ ಆಟ ಮುಗಿಯಿತು ಅಂದ ಗುಜ್ಜಾರಿ ಗಂಗು.

* * *

ತಂದೆಗೆ ಹೇಳಿದ ಹೀಗಾಯ್ತು ಅಂತ. ಆತ ನುರಿತವ ಹೇಳಿದ. "ನಿಮ್ಮಮ್ಮನ ಹೆಸರಿಗೆ ಷೇರುಗಳನ್ನು ವರ್ಗಮಾಡು. ಅವಳಿಗೆ ಇದೊಂದೇ ವರಮಾನವಾದ್ದರಿಂದ ಯಾವಕಾಗದಗಳೂ ಬರುವುದಿಲ್ಲ. ಅಮ್ಮನ್ನೂ ಪುಸಲಾಯಿಸಿ ಆ ಸಾವಿರವನ್ನು ಹೇಗೆ ಬೇಕೋ ಹಾಗೆ ಉಪಯೋಗಿಸಿಕೊ" ಎಂದು.

ಗುಜ್ಜಾರಿ ಗಂಗು ತನ್ನ ಆಶೆಯನ್ನೆಲ್ಲಾ ಈಡೇರಿಸಿಕೊಂಡ.

# ಲೋಕದ ಗಾದೆಗಳು

---

ನೀತಿ ಹೇಳುಕ್ಕೆ ಟ್ರಿಗ್‌ವೀ, ಲೀ, ಕರೆಸಿದರೆ.
ಆತ ರಾಜಿನಾಮೆ ಕೊಟ್ಟು ಆರು ದಿನ ಆಯ್ತು. (ಯುನೋ)

* * *

ಅಂಬಲಿ ಕುಡಿಸೋ ಕೇಂದ್ರದ ಹತ್ತಿರ
ವಿಸಾಶೆ ಮಾಲೀಷಿನ ಅಂಗಡಿ ಇಟ್ಟರಂತೆ. (ರಾಯಲಸೀಮ)

* * *

ಬೇಳೆ ತರೋ ಹೊತ್ತಿಗೆ ಕಿದ್ವಾಯ್ ಕಂಟ್ರೋಲ್ ಸಡಿಲಿಸಿದ. (ಕೇಂದ್ರ)

* * *

ಹಿಂಗ್ಯ ಹಣಕ್ಕೆ ರಶೀತಿ ಕೇಳಿದನಂತೆ. (ನಮ್ಮೂರು)

* * *

ಹನಿ ಕೂಡಿದರೆ ಹಳ್ಳ,
ದನಿ ಕೂಡಿದರೆ ಯೂ. ಎನ್. ಓ. (ಯುನೋ)

* * *

ಹೊತ್ತಲ್ಲದ ಹೊತ್ತಿನಲ್ಲಿ
ಮಲನ್ ಮೈ ಕೊಡವಿದನಂತೆ. (ಆಫ್ರಿಕಾ)

* * *

ಹುಟ್ಟಿದಾಗ ಅಣ್ಣತಮ್ಮಂದಿರು
ಬೆಳೆದಾಗ ದಾಯಾದಿಗಳು. (ನೇಪಾಳ)

* * *

ಐ ಲೈಕ್ ಐಕ್ ಅಂತ ಅಮೇರಿಕಾದಲ್ಲಿ ವೋಟು ಮಾಡಿದರೆ,
ಮಿ ಲೈಕ್ ಮೈಕ್ ಅಂತ ಅವ ಬೊಬ್ಬೆ ಹೊಡಿದನಂತೆ. (ಅಮೇರಿಕಾ)

* * *

ಎಣ್ಣೆ ಬರೋ ಹೊತ್ತಿಗೆ ಮೊಸಡಿಕ್ ಕಣ್ಣು ಮುಚ್ಚಿಕೊಂಡ. (ಇರಾನ್)

* * *

ಸಾಹಸಿ ಸ್ಟಾಲಿನ್ ಸರದಾರನಾದರೂ ಕ್ಷೌರಕನೆದುರಿಗೆ ತಲೆ ತಗ್ಗಿಸಿದ.
(ರಷ್ಯಾ)

* * *

ಹುಡುಗನಾಗಿ ಬಗ್ಗದ ಫ್ರಾಂಕೋ
ಗಿಡಗನಾಗಿ ಬಗ್ಗಾನೇ? (ಸ್ಪೈನ್)

—o—

# "ಕೋದಂಡು-ಲಬೋ ಲಬೋ"



ಅಂದು ವಿವಿಧ ವಿನೋದಾವಳಿಯೊಂದಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿದ್ದರು ಹೀಗೆ ಹೇಳಿದಮೇಲೆ ನಾನು ಗಣ್ಯವಕ್ತೃ, ಸಭ್ಯ ನಾಗರೀಕ, ಸಾರ್ವಜನಿಕಸೇವಾಪರ—ಎಂಬುದನ್ನು ಸುಲಭವಾಗಿ ಊಹಿಸದೆ ಇರಲಾರರಿ. ಈ ವರ್ಷ ಒಂದು ಕಾಲೇಜಿನ ಸ್ಕಾಲರ್‌ಷಿಪ್, ಫ್ರೀ ಷಿಪ್‌ಗಳನ್ನು ಹಂಚುವ ಕಮಿಟಿಗೆ ನನ್ನನ್ನೂ ಸದಸ್ಯನನ್ನಾಗಿ ನೇಮಕ ಮಾಡಿದ್ದಾರೆ.

ನಾನು ವಿದ್ಯಾರ್ಥಿಗಳಿಗೆ ಬೇಕಾದವನಾದ ಮೇಲೆ ನನ್ನ ಮನೆ ಕಾಲೇಜಿನಂತೆಯೇ ಕಂಗೊಳಿಸಿತು. ಹುಡುಗರು ಹೊತ್ತು ಗೊತ್ತು ಇಲ್ಲದೆ ಪದೇ ಪದೆ ಹೋಗುವುದು, ಬರುವುದು ಒಂದು ತರಹ ಚನ್ನಾಗಿಯೇ ಕಾಣಿಸಿತು ಮೊದಲು ಮೊದಲು. ಹುಡುಗರ ಹಾವಳಿ ಹೆಚ್ಚಿದಹಾಗೆಲ್ಲ ಬರು ಬರುತ್ತ ತೊಂದರೆಯೇ ಜಾಸ್ತಿಯಾಯಿತು. ಎಲ್ಲರನ್ನೂ ಕೂರಿಸಿ, ಕಷ್ಟ ಸುಖ ಕೇಳಿ ಸಮಾಧಾನ ಹೇಳುತ್ತ ನಾನು ಮನೆಯಲ್ಲೇ ಕೂತರೆ ನನ್ನ ಜೀವನ ನಡೆಯುವುದು ಹೇಗೆ?—ಅದೂ ಸಾರ್ವಜನಿಕ ಸೇವಕನಿಗೆ! ಆಗ ನಾನು ಒಂದು ಉಪಾಯ ಹೂಡಿದೆ. ಒಂದು ಕಾಗದದಲ್ಲಿ ಒಂದು ಸೂಚನೆ ಬರೆದು ನನ್ನ ಆಫೀಸ್ ರೂಮಿನಬಾಗಿಲಿಗೆ ಅಂಟಿಸಿದೆ. ಹೀಗೆ ಬರೆದಿದ್ದು—"ನಿಮ್ಮನ್ನು ಪ್ರತ್ಯಕ್ಷವಾಗಿ ಪರಿಚಯ ಮಾಡಿಕೊಳ್ಳಲು ನನಗೆ ಕಾಲಾವಕಾಶವಿಲ್ಲ. ನಿಮ್ಮ ನಿಮ್ಮ ಅರ್ಹತೆಗಳನ್ನೆಲ್ಲ ಹೆಸರು, ತರಗತಿಗಳ ವಿವರಗಳೊಡನೆ ಕಾಗದಗಳಲ್ಲಿ ಬರೆದುಬಿಟ್ಟುಹೋಗಿ" ಎಂದು.

ಹುಡುಗರು ಬಂದರು. ಸೂಚನೆ ಓದಿದರು. ಅವರೂ ಕುಪಿತರಾಗಲಿಲ್ಲ. ಒಳ್ಳೆಯವರು, ಒಳ್ಳೆಯ ಏರ್ಪಾಡೇ ಎಂದು ಅಂದುಕೊಂಡರು.

ಒಂದೊಂದು ದಿನವೂ ನೂರಾರು ಕಾಗದಗಳು ಮೇಜಿನಮೇಲೆ ಬೀಳತೊಡಗಿದವು. ತರಾವರಿ ಕಾಗದಗಳು. ಶೈಲಿಯಲ್ಲಿ, ಒಕ್ಕಣೆಯಲ್ಲಿ, ಪ್ರಾರಂಭ, ಮುಕ್ತಾಯ

ಮಾಡುವ ರೀತಿಯಲ್ಲಿ—ವಿಷಯದ ನಿರೂಪಣೆಯಲ್ಲಿ—ಅದೆಷ್ಟು ವೈವಿಧ್ಯತೆ! ಒಂದೊಂದು ಕಾಗದ ಓದಿದಾಗಲೂ ನನಗೆ ಮೈ ರೋಮಾಂಚವಾಗುತ್ತಿತ್ತು. ಕಷ್ಟ ಪರಿಸ್ಥಿತಿಗಳ ವರ್ಣನೆ—ಅತ್ಯಂತ ದಾರುಣ ಘಟನೆಗಳ ಚಿತ್ರಣ—ವಿಧಿ ಲೀಲೆ—ಅದೃಷ್ಟದ ಅಟ್ಟಹಾಸ—ಮಾನವ ಜನ್ಮದ ನಿಕೃಷ್ಟತೆ—ನೂರಾರು ಕಾದಂಬರಿಗಳಿಗೆ ಈ ಕಾಗದಗಳಿಂದ ಸೊಗಸಾದ ಕಥಾವಸ್ತುಗಳನ್ನು ದೊರಕಿಸಿಕೊಡಬಹುದು! ಇಂತಹ ಕಮಿಟಿಗಳಿಗೆ ಪ್ರಸಿದ್ಧ ಕಾದಂಬರಿಗಾರರನ್ನೋ, ನಾಟಕ ಕಥೆಗಳ ಲೇಖಕರನ್ನೋ ನೇಮಿಸಿದರೆ ದೇಶಕ್ಕೆ ಹೆಚ್ಚು ಲಾಭವಾಗುವುದು ಎಂದು ನನಗೆ ಹೊಳೆಯುತ್ತದೆ!

ಅಂದು ವಿವಿಧ ವಿನೋದಾವಳಿಗೆ ಅಧ್ಯಕ್ಷ ಎಂದನಲ್ಲ, ಅಧ್ಯಕ್ಷ ಭಾಷಣಮಾಡಿ ಮನೆಗೆ ಬರುವ ಹೊತ್ತಿಗೆ ಬಹಳ ಹೊತ್ತಾಗಿತ್ತು. ಮರುದಿನವೇ 'ಸ್ಕಾಲರ್‌ಷಿಪ್, ಫ್ರೀಷಿಪ್ ಮೀಟಿಂಗ್' ನಡೆಯಲು ಗೊತ್ತುಪಡಿಸಿದ್ದ ದಿನ. ಆದುದರಿಂದ ಅವತ್ತು ಎಲ್ಲ ಹುಡುಗರೂ ಬಂದು ಕಟ್ಟಕಡೆಯದಾಗಿ, ಇನ್ನೊಂದೊಂದು ಕಾಗದ ಬರೆದು ಮೇಜಿನಮೇಲೆ ಪೇರಿಸಿದ್ದರು. ಆ ಕಾಗದಗಳನ್ನು ನೋಡುವ ಮನಸ್ಸೇ ನನಗಿರಲಿಲ್ಲ! ಆದರೆ ನೂರಾರು ಕಾಗದಗಳ ಮಧ್ಯೆ ಒಂದು ಕಾಗದ ಮಾತ್ರ ಸ್ವಲ್ಪ ತನ್ನ ಹೊರ ಮೈಯನ್ನು ಚಾಚಿ ನನ್ನ ದೃಷ್ಟಿಯನ್ನು ಸೆಳೆಯಿತು. ಅದನ್ನ ಪೂರ್ತಿ ಎಳದೆ. ಅದು ಏನೂ ಕಾಗದವೂ ಆಲ್ಲ. ಬರವಣಿಗೆಯೇ ಇರಲಿಲ್ಲ. ಮೇಲೆ ಇದೆಯಲ್ಲ—ಒಬ್ಬ ಹುಡುಗ ಲಬೋ ಲಬೋ ಎಂದು ಬಾಯಿ ಬಡಿದುಕೊಳ್ಳುತ್ತ ನಿಂತಿರುವ ಚಿತ್ರ; ಅದೇ ಅಲ್ಲಿದ್ದಿದ್ದು, ಅದರ ಕೆಳಗೆ "M. T. ಕೋದಂಡು—ಲಬೋ ಲಬೋ" ಎಂದು ಬರೆದಿತ್ತು! ಚಿತ್ರಾನೂ ಚನ್ನಾಗಿ ಬರೆದಿದ್ದ. ನೋಡಿದ ತಕ್ಷಣ ತುಂಬ ನಗು ವಂತಿತ್ತು; ಆ ಚಿತ್ರವನ್ನು ಎಲ್ಲರಿಗೂ ತೋರಿಸಿ ನಾನು ಒಂದು ವಿನೋದಾವಳಿಯನ್ನೇ ಮಾಡಿದೆ.

ನಕ್ಕು ನಕ್ಕು ಸಾಕಾಯಿತು. ನಗುವಿನ ಮಧ್ಯೆ ಹಾಗೇ ಚಿತ್ರ ನೋಡುತ್ತಿದ್ದ ನನಗೆ ಆ ಚಿತ್ರ ಬರದವನ ಬಗ್ಗೆ ಏನು ವಿವೇಚನೆ ಮಾಡಬೇಕು ಎಂದು ಯೋಚಿಸಿದೆ.

ಹುಡುಗ ಬಲು ಚೂಟಿ ಅಲ್ಲವೆ? ಇಡೀ ಸನ್ನಿವೇಶವನ್ನು ಅರ್ಥಗರ್ಭಿತವಾಗಿ ಪರಿಣಾಮಕಾರಿಯಾಗಿ ಹೇಳಿದ್ದಾನೆ ಅಲ್ಲವೆ? ಕಾಲ, ಮನಶ್ಶಾಂತಿ ನಮ್ಮ ಹತೋಟಿಯಲ್ಲಿಲ್ಲದ ಈ ವೈಜ್ಞಾನಿಕ ಯುಗದಲ್ಲಿ ಇಂತಹ ನಿರೂಪಣೆ ಲಾಭದಾಯಕವಲ್ಲವೆ?—ಹೀಗೆ ಮನಸ್ಸಿಗೆ ಒಂದೊಂದಾಗಿ ಬಂತು. ನಾನೇನೋ ಕೋದಂಡುವಿಗೆ ಶಿಫಾರಸು ಮಾಡುವುದು ಖಂಡಿತ!

—ಹಾ. ರಾ.



# “ಇದು ಅವರ ಅಂದರೆ ಪೋಲೀಸಿನವರ ತಪ್ಪಲ್ಲವೇ?”

---

“ಈ ಪೋಲೀಸಿನವರಿಗೆ, ಸ್ವಾತಂತ್ರ್ಯ ಬಂದಮೇಲೆ, ಇದ್ದ ಬುದ್ಧಿ ಎಲ್ಲಾ ಹಾರೇಹೋಯ್ತು” ಅಂದ ಶಾಮು.

‘ಯಾಕೆ ಹಾಗಂತೀಯೋ! ಮೊದಲಿಗಿಂತ ಈಗ ಪೋಲೀಸಿನವರು ಎಷ್ಟೋ ಮರ್ಯಾದೆಯಿಂದ ಮಾತನಾಡಿಸುತ್ತಾರೆ. ಸುಮ್ಮ ಸುಮ್ಮನೆ ಕಿರಕುಳ ಕೊಡುಲ್ಲ. ಮಾಸಲಬಟ್ಟೆಯುವನೇ ಕಳ್ಳ ಅಂತ ಹಿಡಿದುಕೊಳ್ಳುವುದಿಲ್ಲ. ಅವರಿಗೂ ಗುಮಾನಿ, “ಆ ಬಟ್ಟೆಯುವನೇ ಪ್ರಜಾರಾಜ್ಯದಲ್ಲಿ ದೆಹಲಿತನಕ ಕೂಗು ಕೇಳಿಸುವಂತೆ ಕೂಗಬಹುದು” ಎಂದು, ನಾನು ಹೇಳಿದೆ. ನನ್ನ ಸ್ವಂತ ಅನುಭವವೂ ಅದಕ್ಕೆ ಸಾಕ್ಷಿಯಾಗಿತ್ತು. ಮೊನ್ನೆ ಸೈಕಲ್ ಮೇಲೆ ರಾತ್ರಿ ಮನೆಗೆ ಹೋಗುವಾದ ಆರಿಹೋದ ದೀಪವನ್ನೂ ಹತ್ತೆಹಚ್ಚಿದ ದಫೇದಾರ, ‘ಬೇಗ ಮನೆಗೆಹೋಗಿ ಸಾರ್ ಕಾನ್‌ಸ್ಟೆಬಿಲ್ಲನ ಕೈಗೆ ಸಿಕ್ಕಿಹಾಕಿಕೊಳ್ಳಬೇಡಿ’ ಅಂತ ಹುಷಾರಿಕೊಟ್ಟು ಕಳಿಸಿದ್ದ. ಆ ಹೃದಯ ವಿದ್ರಾವಕ ಅನುಭವದಿಂದಲೇ ಪೋಲೀಸಿನವರ ಮೇಲಿದ್ದ ಪ್ರೀತಿಯನ್ನೂ ಹೊರ ಸೂಸಿದ್ದೆ ನಾನು.

ಆದರೆ ಶಾಮು ಏನಂಡ ಗೊತ್ತೆ?

“ಹಾಗಲ್ಲಾ ಪ್ರಸಾದ್! ಪೋಲೀಸಿನವರಿಗೆ ಬುದ್ಧಿಹಾರಿಹೋಯ್ತು ಅಂತ ಯಾಕೆಂದೆ ಗೊತ್ತೆ?

ನನಗೆ ಚಪ್ಪಲಿ ಉಂಗುರ ಕಿತ್ತುಹೋಯ್ತು ಅನ್ನು. ಒಂಟಿ ಚಪ್ಪಲೀನ ಕೈಲಿ ಹಿಡಿದುಕೊಂಡು ಮೆರವಣಿಗೆ ಹೋಗುವ ಹಾಗಾಗಿದ್ದೆ ಅನ್ನು. ಆಗ ಕಾಲು ರಸ್ತೆಯಲ್ಲಿ ಸಾಲ್ ಸಾಲಾಗಿ ಕೂತಿರುತ್ತಿದ್ದ ಚಪ್ಪಲಿಗಾರರ ಹತ್ತಿರಹೋಗಿ ಎರಡಾಣೆ ಬಿಸಾಕಿದರೆ, ಉಂಗರಚಪ್ಪಲಿಗೆ ಹಚ್ಚಿ ಕಾಲಿಗೆ ಮೊಳೆತರಿಯುವಂತೆ ಆ ಕಾರ್ಮಿಕರು ಮಾಡಿಕೊಡುತ್ತಿದ್ದರು.

ಈಗ ಈ ಪೋಲೀಸಿನವರ ಹಾವಳಿಯಿಂದಾಗಿ ರಸ್ತೆ ಪಕ್ಕದ ಪಾದಚಾರಿ ಹಾದಿಯಲ್ಲಿ ಒಬ್ಬ ಚಪ್ಪಲಿ ಕಾರ್ಮಿಕನೂ ಕಾಣಬರುವುದಿಲ್ಲ. ಮನೆತನಕ ಒಂಟಿ ಚಪ್ಪಲೀನ ಒಂಟಿ ಕೈಯಲ್ಲಿ ಧರಿಸಿ ನಾನು ಬರಬೇಕಾಗಿದೆ.

ಇದು ಅವರ, ಅಂದರೆ ಪೋಲೀಸಿನವರ ತಪ್ಪಲ್ಲವೇ?

* * *

ಕಾರ್ತೀಕ ಸೋಮವಾರ, ಕಛೇರಿಯಲ್ಲಿ ಬಲುಕೆಲಸ. ಮನೆಗೆ ಸಂಜೆ ಬರುವಾಗ ಏಳುಗಂಟೆ. ಬಸ್ ನಿಲ್ದಾಣದ ಹತ್ತಿರ ಜ್ಞಾಪಕ. ಮನೆಯಲ್ಲಿ ಆಕೆ ಹೇಳಿದ್ದಳು. "ಶಿವನ ಪೂಜೆಗೆ ಎರಡು ಕುಚ್ಚು ಹೂವು ತೊಗೊಂಡುಬನ್ನಿ ಅಂತ. ಮರೆತೇ ಹೋಗಿತ್ತು. ಪೇಟೆಗೆ ಹೋಗಿ ತರೋಣ ಎಂದರೆ ಹತ್ತು ನಿಮಿಷ ಕಾಲಾವಕಾಶ ಇಲ್ಲ. ಆದರೆ ಆ ಪಾದಚಾರಿ ಹಾದಿಯಲ್ಲಿ, ರಸ್ತೆ ಇಕ್ಕೆಡೆಯಲ್ಲಿ, "ಘಮಘಮಿಸುವ ಕುಚ್ಚು, ಎರಡೇ ಆಣೆ" ಅಂತ, ಕೂಗುವ ಹೂವುಗಾರರ ತಂಡವೇ ಇರುತ್ತಿತ್ತು. ಮಾಸಲು ಎರಡಾಣೆಕೊಟ್ಟು, ಎರಡೇ ನಿಮಿಷದಲ್ಲಿ ಕುಚ್ಚುಹಿಡಿದು ಬಸ್ಸುಹತ್ತಿ ಮನೆ ಸೇರುತ್ತಿದ್ದೆ. ಮನೆಯಾಕೆಯ ಬಿರಿನಗುವನ್ನು ಕಂಡು ನಾನು ಧನ್ಯ ಎಂದುಕೊಳ್ಳುತ್ತಿದ್ದೆ.

ಈಗಲಾದರೋ ಆ ಪಾದಚಾರಿಹಾದಿಯಲ್ಲಿ ಬರೀ ಪಾದಚಾರಿಗಳೇ!! ಯಾವ ಹೂವುಗಾರನೂ ಕಾಣಲೊಲ್ಲ. ಹೂವಿಗೆ ಅಂತ ಪೇಟೆಗೆ ಹೋದರೆ ಬಸ್ಸು ಸಿಗಲೊಲ್ಲದು. ಬಸ್ಸಿಗೆ ಅಂತ ಅವಸರ ಪಟ್ಟರೆ ಹೂವು ಸಿಗಲೊಲ್ಲದು ಹೀಗಾಗಿದೆ.

ಇದು, ಅವರ, ಅಂದರೆ ಪೋಲೀಸಿನವರ ತಪ್ಪಲ್ಲವೇ?

* * *

ಬೆಳಿಗ್ಗೆ ಕಛೇರಿ. ಮಧ್ಯಾಹ್ನ ಆಫೀಸರ ಮನೆಯಲ್ಲಿ ಕಛೇರಿ. ಹಳೇ ಫೈಲುಗಳಿಗೆ ಅವತ್ತೇ ಮುಕ್ತಾಯ. ಬೆಳಿಗ್ಗೆ ತಂಗಳು ತಿಂದು ಹೊರಟವನಿಗೆ ಮಧ್ಯಾಹ್ನ ಆಫೀಸರ ಮನೆಯ ಮುಂಡಕ್ಕಿಯೇ ಆಹಾರ. ಅದೂ ಬೆಳ್ಳಿ ತಟ್ಟೆಯಲ್ಲಿ ಒಂದು ಚಮಚದಷ್ಟು ಗೋಪುರ ಇದ್ದುದು. ನನ್ನ ಹಲ್ಲಿಗೇ ಸಾಲದು.

ಓ! ಲಕ್ಷ್ಮಣಾ! ಅಂತ ಸಂಜೆ ಏಳಕ್ಕೆ ಮನೆಗೆ ಪೇಟೇರಸ್ತೇಲಿ ಹಿಂತಿರುಗುತ್ತಿದ್ದಾಗ, ಮಧ್ಯ ರಸ್ತೆಯಲ್ಲಿ ಒಂದು ಘರಮಾಗರಂ ವಾಸನೆ ಮೂಗನ್ನು ಅಪ್ಪಳಿಸಿ ಹಿಡಿಯುತ್ತಿತ್ತು. ರಸ್ತೆಯೆಲ್ಲಾ ಅದೇ ವಾಸನೆ, ರಸ್ತೆ ಅಂಚಿನ ಪಾದಚಾರಿ ಹಾದಿಯ ಮೇಲಿದ್ದ ಒಂದು ಪುದೀನಾ ವಡೆ ಅಂಗಡಿ; ಅಲ್ಲೊಂದು ಅಗ್ಗಿಷ್ಟಿಕೆ, ಒಂದು ಬಾಂಡಲೆ, ಒಂದು ತಟ್ಟೆ ಹಿಟ್ಟು, ಒಬ್ಬ ನಳಕುಲಪ್ರಸೂತ. ಎರಡಾಣೆಗೆ ಬಿಸಿ ಬಿಸಿ ನಾಲ್ಕು ವಡೆಗಳನ್ನೂ ನನ್ನ ಕಣ್ಣೆದುರಿಗೇ ಕರಿದು ಕೊಡುವ. ನೋಡುತ್ತಲೇ ಬಾಯಿತುಂಬ ನೀರು ಸೇರುತ್ತಿತ್ತು. ಬಿಸಿ ವಡೆ ಆ ನೀರಿನಿಂದ ತಣ್ಣಗಾಗಿ ಹೊಟ್ಟೆ ಸೇರುವ ಹೊತ್ತಿಗೆ ನಾಲ್ಕು ಹೆಜ್ಜೆ ಮುಂದುವರೆಯುತ್ತಿದ್ದೆ. ಮುಂದೆ ಚಪ್ಪರಿಸಿಕೊಳ್ಳುವ ರಭಸದಲ್ಲಿ ಮನೆತನಕ ಹಾದಿ ಬಲುಬೇಗ ಸವೆಯುತ್ತಿತ್ತು.

ಎರಡು ದಿನ ಆ ವಾಸನೆ, ಸೋಪುಹಾಕಿ ನಾಲಿಗೆ ತಿಕ್ಕಿದರೂ ಹೋಗುತ್ತಿದ್ದಿಲ್ಲ. ಅಂತಹ ಪ್ರಚಂಡ ಅಟಾಮಿಕ್ ವಾಸನೆ.

ಈ ಪೋಲೀಸಿನವರು ಬಂದರಲ್ಲಪ್ಪಾ! ಆ ಪಾದಚಾರಿ ಹಾದಿಯವಲಲ, ನಳ ಮಹಾಶಯರನ್ನೂ ನಿರ್ಮೂಲಮಾಡಿದರಲ್ಲಪ್ಪಾ! ನನ್ನ ಬಾಯಿಗೆ ತೀಟೆ ಹಚ್ಚಿದರಲ್ಲಪ್ಪಾ!

ಇದು, ಅವರ, ಅಂದರೆ ಪೋಲೀಸಿನವರ ತಪ್ಪಲ್ಲವೇ?

*                *                *

ಒಂದು ರೂಪಾಯಿಗೆ ಒಂದು ಫೌಂಟನ್ ಪೆನ್ನು
ಮುಂದಿನ ವರ್ಷದ ಕ್ಯಾಲೆಂಡರು, ಡೈರಿ,
ಕಂದಗಳಿಗೆ ಕೊಡಬಹುದಾದ ಆಟದ ಸಾಮಾನು,
ಚೆಂದಣದ ಬೊಂಬೆ, ಗಂಧದಸಾಬೂನು
ಸಂದರ್ಭಕ್ಕೆ ಸರಿಯಾದ ಉಡಿಗೆ ತೊಡಿಗೆ,

ಸಾಯಂಕಾಲದಲ್ಲೂ, ರಸ್ತೆ ಅಂಚಿನ, ಕಾಲುದಾರಿಯಲ್ಲಿ ಸಿಗುತ್ತಿದ್ದುವು. ಮಧ್ಯ ರಸ್ತೆಯಲ್ಲಿ ನಡೆಯುವ ಪಾದಚಾರಿಗಳಿಗೆ. ಈ ಅಂಚಿನ ಕಾಲುಹಾದಿಯ ಅಂಗಡಿಗಳೇ ಸುಲಭ ಮಾರು ಕಟ್ಟೆಯಾಗಿದ್ದುವು—ಈಗ ಕಾಲು ದಾರಿಯಲ್ಲಿ ಪಾದಚಾರಿಗಳೇ ನಡೆಯುವ ಹಾಗಾಗಿದೆಯಲ್ಲಾ.

ಇದು, ಅವರ, ಅಂದರೆ ಪೋಲೀಸಿನವರ ತಪ್ಪಲ್ಲವೇ?

——o——



" ಕುಮಾರ್! ಪ್ರಭಾತ್‌ಗೆ ತಾನೇ, ನನಗೂ ಒಂದು ಟಿಕೆಟ್ ತೊಗೊಂಡಿರು.... ...
ನಾನ್ ಬಸ್‌ನಲ್ಲಿ ಬಂದ್‌ಬಿಡ್ತೇನೆ.... ..."

## "ಒಂದು ಗಂಟೆಯಂತೆ"

ಸುಮಾರು ಸಡಗರ. ಕಿರಿ ಮಗಳಿಗೆ ಕಿರಿಗೆ ತರಬೇಕಾದರೆ ಅಜ್ಜೀಗೆ ಸಡಗರ ಇಲ್ಲದೆ ಇರುತ್ತ್ಯೆ? ಅಜ್ಜಿ ಸಡಗರ ಪಟ್ಟರೆ ಅಮ್ಮ ಸುಮ್ಮನಿರುಕ್ಕಾಗುತ್ತ್ಯೆ? ದೊಡ್ಡವರು ಪರದಾಡಿದರೆ ಕಿರಿಮಗಳು ಸರಿದಾಡಬೇಡವೇ? ಅಂದ ಮೇಲೆ ಹಿರಿ ಹೆಣ್ಣು ಮಕ್ಕಳು ಸಿಂಗಾರಮಾಡಿಕೊಂಡು ಸಿದ್ಧವಾಗಬೇಡವೇ?

ಮಧ್ಯಾಹ್ನ ಮೂರು ಗಂಟೆಗೆ ರಾಹುಕಾಲ ಕಳೆದಿರುತ್ತೆ. ನನ್ನ ಸ್ನೇಹಿತ ಶಾಮು ಕಛೇರಿಗೆ ಹೋಗಿ ಮೋಟಾರ್ ಕಳಿಸುತ್ತಾನೆ. ಮೂರುವರೆ ಗಂಟೆಗೆ ಅರಳೇ ಪೇಟೆಗೆ ಎಲ್ಲರೂ ಹೋಗಿ ರೇಷ್ಮೆ ಕಿರಿಗೆಕೊಂಡು ತರೋದು ಸುಮಾರು ನಾಲ್ಕುವರೆಗೆ ಮನೆಗೆ ಹಿಂದಿರುಗಬಹುದು. ಐದಕ್ಕೆ ಶಾಮುಗೆ ಮೋಟಾರ್ ಕಳಿಸಬಹುದು ಅಂತ ಅಂದಾಜು ಹಾಕಿದ್ದೆ ಅದನ್ನು ಕಾರ್ಯಗತಮಾಡದಿದ್ದರೆ ಶಾಮುವಿಗೆ ಅನಾನುಕೂಲವಾಗುತ್ತೆ; ಇನ್ನೊಂದು ಸಾರಿ ಮೋಟಾರು ಎರವಲು ಕೊಡೋದೇ ಇಲ್ಲ ಅಂದುಬಿಟ್ಟಾನು ಎಂಬ ಹೆದರಿಕೆ ಬೇರೆ? ಕಟ್ಟುನಿಟ್ಟಾದ ಅಪ್ಪಣೆ ಕೊಟ್ಟೆ ಅಮ್ಮಾ, ಹೆಂಡತಿ ಮಕ್ಕಳು ಎಲ್ಲರಿಗೂ—ಮೂರು ಗಂಟೆಗೆ ಎಲ್ಲರೂ ಸಿದ್ಧರಾಗಿರಿ ಅಂತ— ಎರಡು ಗಂಟೆಹೊತ್ತಿಗೆ–

ಎರಡು ಗಂಟೆಯಿಂದ ಬಚ್ಚಲಮನೆ ಬಿಡುವೇ ಇಲ್ಲ. ಅಷ್ಟು ಜನ ಅಷ್ಟು ಹೊತ್ತು ಮುಖ ತೊಳೆದುಕೊಳ್ಳುವವರು. ಐದು ನಿಮಿಷಕ್ಕೆ ಒಬ್ಬರಂತೆ, ಒಬ್ಬೊಬ್ಬರನ್ನೂ ಅವಸರಪಡಿಸ ಹತ್ತಿದೆ. ಮೂರು ಗಂಟೆ ಹೊತ್ತಿಗೆ, ಒಬ್ಬರೂ ಪೂರ್ಣ ಸಿದ್ಧರಾಗಿರಲಿಲ್ಲ. ಕಿರಿ ಮಗಳು ಜಡೆಗೆ ಟೇಪು ಕಟ್ಟಿರಲಿಲ್ಲ. ಹಿರಿ ಮಗಳು ಕ್ಯೂಟಿಕ್ಸ್ ಹುಡುಕುತ್ತಾ ಇದ್ದಳು. ನಡುವಳವಳು, ಕನ್ನಡಕಕ್ಕೆ ಪಾಲೀಷ್ ಹಾಕುತ್ತಿದ್ದಳು. ನಮ್ಮಾಕೆ ಧಾರೆಸೀರೆ ಉಟ್ಟು ಮುಗಿಸಿದ್ದರೂ, ಸರಿಹೋಗುವ ರವಿಕೆಯಾವುದು ಎಂದು ತಲಾಷ್ ಮಾಡುತ್ತಿದ್ದಳು. ಅಮ್ಮನಂತೂ ವಿಭೂತಿ ಪಟ್ಟಿಯನ್ನು ಕೃಷ್ಣಾಜಿನದ ಪೆಟ್ಟಿಗೆಮೇಲೆ ಕನ್ನಡಿ ಇಟ್ಟು, ಸರಿಮಾಡಿಕೊಳ್ಳುತ್ತಿದ್ದಳೇ ಹೊರತು ಸರಿಮಾಡಿ ಮುಗಿಸಿರಲಿಲ್ಲ–ನಾನೊಬ್ಬನೇ ಸಿದ್ಧವಾಗಿ ಕೇಳಿಸಿದ ಹಾರನ್ ಎಲ್ಲ ಶಾಮು ಮೋಟಾರಿನದೇ ಎಂದು ಹೊರಕ್ಕೂ–ಸಿದ್ಧವಾದಿರಾ ಎಂತ ಒಳಕ್ಕೂ ಪರದಾಡುತ್ತಿದ್ದೆ=ಅಚ್ಚುಕಟ್ಟಾದ ಪಂಚೆ ಕಚ್ಚೆಉಟ್ಟು, ರೇಷ್ಮೆ ಜುಬ್ಬಾಧರಿಸಿ, ಮಕಮಲ್ ಚಪ್ಪಲಿ ಧರಿಸಿ ಅಂಗವಸ್ತ್ರಹೊದ್ದು, ಪರದಾಡಿದ್ದೂ ಪರದಾಡಿದ್ದೇ!

ಮೂರು, ಹದಿನೈದು. ಆ ವೇಳೆಗೆ ನಮ್ಮ ಮನೆಯ ದೊಡ್ಡಗಡಿಯಾರ–ನಮ್ಮ ಅಪ್ಪನಿಗೆ ಅವರ ಮಾವ ಮದುವೆ ಉಡುಗೊರೆ ಕೊಟ್ಟಿದ್ದದು–ಅದು. ಮೂರಕ್ಕೆ ಮೂರು ಹೊಡಿಯುತ್ತೆ ಈಗ. ಮೂರುಕಾಲಿಗೆ ನಾಲ್ಕು ಬಾರಿಸುತ್ತೆ ಮೂರುವರೆಗೆ ಐದು ಹೊಡೆದುಕೊಳ್ಳುತ್ತೆ. ಮೂರು ಮುಕ್ಕಾಲಿಗೆ ಆರು ಸಾರಿ ಗಂಟೆ ಬಾರಿಸುತ್ತೆ.

ನಾಲ್ಕಾದರೆ ಏಳು, ಏಳಾದರೆ ಹನ್ನೊಂದು, ಹೀಗೆ ಇಂದಿನ ಕಾಲದವೇಗ ವಾತಾವರಣಕ್ಕೆ ಸರಿಹೊಂದಿಕೊಂಡು, ಹೊತ್ತಲ್ಲದ ಹೊತ್ತಿನಲ್ಲಿ ಗಂಟೆ ಬಾರಿಸಿದ್ದೂ ಬಾರಿಸಿದ್ದೇ–ಆ ದೊಡ್ಡ ಗಡಿಯಾರ. ಈಗ ನಾಲ್ಕು ಹೊಡೆಯಿತು.

ಆ ಹೊತ್ತಿಗೆ ಹೊರಗಡೆ ರಸ್ತೆಯಲ್ಲಿ ಹಾರನ್ ಶಬ್ದ. ಅದಕ್ಕಿಂತ ಮಿಗಿಲಾದ ಭೋರ್ಗರೆಯುವ ಆ ಮೋಟಾರಿನ ಎಂಜಿನ್, ಹಾಗೂ ವಿವಿಧ ಅವಯವಗಳ ಶಬ್ದ. ಹೊರಗೆ ಓಡಿನೋಡಿದೆ. ಶಾಮುವಿನ ಮೋಟಾರೇ. ನಮ್ಮ ಮನೆ ಬಾಗಿಲ ಮುಂದೆಯೇ ನಿಂತಿತು. ನಿಂತಶಬ್ದ ಹುಟ್ಟುಕಿವುಡನಿಗೂ ಕೇಳಿಸುವಾಗ ನನಗೆ ಕೇಳಿಸದೇ ಇದ್ದೀತೇ? ಕೇಳಿಸಿತು. ನಂತರ, ಕಿವುಡಾದೆ ಕಾಲುಗಂಟೆ ತನಕ, ನಾನು.

ಒಳಕ್ಕೆ ಓಡಿದೆ. "ಅಮ್ಮಾ! ಮೋಟಾರು ಬಂತು, ಹೊರಡಿ" ಎಂದೆ. ಅಮ್ಮಾ, ಲೇ ಕಮಲೂ ನೀ ಮೊದಲು ಹೋಗಿ ಕೂತುಕೋ" ಎಂದು ಅಬ್ಬರಿಸಿದಳು. "ಲೇ" ಅರಚಿದಳು, "ಲೀಲೂ, ನೀನು ಹೋಗಿ ಅಪ್ಪನಜತೇಲಿ ಕೂತುಕೋ" ಎಂದು. ಲೀಲೂ ಕಿರುಲಿದಳು, "ಪುಟ್ಟೂ ನಿನ್ನ ಕಿರಿಗೆ ತರುಕ್ಕೆ ಕಾಣೆ ನಾವೆಲ್ಲಾ ಹೊರಡೋದು ನೀನು ಮೊದಲು ಹೋಗಿ ಕೂತುಕೋ ಎಂದು. ಪುಟ್ಟು ತೊದಲಿದಳು. ನಾನು ಡ್ರೈವರ್ ಪಕ್ಕದಲ್ಲೇ ಕಿಟಕಿ ಹತ್ತಿರ ಕೂತುಕೋತೀನಿ, ಅಂತ.

ಮೋಟಾರಿನ ಅವಯವಗಳ ಶಬ್ದ ಸಮೂಹಕ್ಕಿಂತ ಇವರುಗಳ ವಾದ್ಯಗೋಷ್ಠಿ ಏನೇನೂ ಕಮ್ಮಿ ಇರಲಿಲ್ಲ.

ಆಗ ನನಗೆ ಭಗವದ್ಗೀತೆಯ ಕೃಷ್ಣನ ಜ್ಞಾಪಕ ಬಂತು. ಅತ್ತಕಡೆ ಕರಿ ಸುಯೋಧನನ ಕಡೆಯವರು ಶಂಖವನ್ನು ಊದಿ ಗುಲ್ಲೆಬ್ಬಿಸಿದರು. ಇತ್ತಕಡೆ ಬಿಳೀ ಪಾಂಡವರ ಕಡೆಯವರು. "ಶಂಖಂ ದಧ್ಮೌ ಪ್ರತಾಪವಾನ್"

ಒಂದೊಂದು ಶಂಖದ ಪ್ರತಾಪಕ್ಕೂ ಒಂದೊಂದು ಹೆಸರು. ಮೋಟಾರಿಗೆ ಇದ್ದಂತೆಯೇ! ಇದು ಕಾರ್ಬುರೇಟರ್ ಶಬ್ದ, ಅದು ಬಾಗಿಲು ಗುರು ಗುರು ಇದು ಫಾನ್‌ಬೆಲ್ಟ್‌ನ ಕಿರುಚಿಲು, ಅದು ಗ್ರೀಸ್ ಸಾಲದ ಗರ ಗರ. ಇದು ನೀರಿನ ಪಂಪಿನ ಬಿಸುಸುಯ್ಯಿ—ಅದು ಎಣ್ಣೆ ಹತ್ತಿದ ಕೊರಗು ಫ್ಲೀಟ್ ಮೋಟಾರಿನ ತದ್ವತ್ತೇ—ಕುರುಕ್ಷೇತ್ರದ ಶಂಖನಿನಾದ. ಮನೆಹೊರಗೂ ಒಳಗೂ ಕುರುಕ್ಷೇತ್ರದ "ಶಂಖಂ ದಧ್ಮೌ"

ಶ್ರೀ ಕೃಷ್ಣಪರಮಾತ್ಮನ ಜ್ಞಾಪಕ ಬರುತ್ತಲು ಅವನಂತೆಯೇ ನಾನು ನಮ್ಮನೆಯ ಒಳಗಿನ ಕುರುಕ್ಷೇತ್ರವನ್ನು ಸರಿ ಮಾಡಬೇಕು ಎಂದು ಅನ್ನಿಸಿತು.

ನನ್ನ ಪಾಂಚಜನ್ಯವನ್ನು ಊದಿದೆ. "ಅಮ್ಮಾ! ಎಲ್ಲರೂ ಇನ್ನೂ ಐದು ನಿಮಿಷದಲ್ಲಿ ಹೊರಡಲೇಬೇಕು ಯಾರು ಸಿದ್ಧವಾಗಿದ್ದೀರೋ ಅವರುಗಳು ಮಾತ್ರ ಹೊರಡುತ್ತಾರೆ" ಎಂದು.

ಆಗ ಅಮ್ಮ ಕೃಷ್ಣಾಜಿನದ ಪೆಟ್ಟಿಗೆಯಮೇಲಿಂದ ಕನ್ನಡಿಯನ್ನು ತೆಗೆದು ಆ ಪೆಟ್ಟಿಗೆಗೆ ಅಣಿಯಾಗಿ ನೇರಿಸಿ, ತನ್ನ ಪರಿವಾರವನ್ನೆಲ್ಲಾ ವಿಹಂಗಮ ದೃಷ್ಟಿಯಿಂದ ನೋಡಿ, ಕಡೆಗೆ ನನ್ನ ಕಡೆ ಕಣ್ಣುಹೊರಳಿಸಿ "ಮಗೂ! ನಾವೆಲ್ಲಾ ಸಿದ್ಧ. ಆದರೆ ನಿನ್ನ ಪಂಚೆಕಚ್ಚೆ ಸರಿಮಾಡಿಕೊಂಡರೆ ಎಲ್ಲರೂ ಹೊರಡಬಹುದು" ಎಂದಳು.

ಆಗಲೇ ನನಗೆ ಅರಿವು. ಹದಿನಾರು ವರ್ಷದಿಂದ ಪೈಜಾಮ ಧರಿಸಿದ ನಾನು ಈಗಲೇ ಪಂಚೆ, ಕಚ್ಚೆ ಅಂತ ಹಾರವರಹಾಗೆ ಹಾರಾಡಿದ್ದು. ಅಭ್ಯಾಸ ತಪ್ಪಿದ ಹಾರವ ಗಂಟೇನೂ ಆರತಿ ಎತ್ತಿದ ಹಾಗೆ ಆಗಿದ್ದೆ.

"ಎರಡು ನಿಮಿಷಾ ಅಮ್ಮಾ ಸರಿ ಮಾಡಿಕೊಂಡು ಬರುತ್ತೇನೆ" ಎಂದು ಹೇಳಿ ನನ್ನ ಕೊಠಡಿಗೆ ಹೋಗಿ ಎರಡೇ ನಿಮಿಷದಲ್ಲಿ ಸರಿದು ಹೋದ ಕಚ್ಚೆಯನ್ನೂ, ಬಿಡಿಸಿ ಬಂದ ಪಂಚೆಯನ್ನೂ ಸರಿಮಾಡಿಕೊಂಡು ಅದಕ್ಕೆ ದಿಗ್ಬಂದನೆ ಆಗಲೆಂದು ಹಳೆಯ ಬೆಲ್ಟನ್ನು ಬಿಗಿದು. ಹೊರಕ್ಕೆ ಬಂದು, "ಅಮ್ಮಾ" ಎಂದೆ. "ಅಮ್ಮಾ" ಏನಂದಳು ಗೊತ್ತೆ.

"ಮಗೂ! ಒಂದು ಗಂಟೆಯಿಂದ ಕಾದಿದ್ದೇವಲ್ಲೋ! ನಿನ್ನ ಸಡಗರ ಸಂಭ್ರಮದ ಮುಗಿಯುವಿಕೆಗೆ, ಇಷ್ಟು ಹೊತ್ತು ಹೆಂಗಸರನ್ನು ಕಾಯಿಸಬಹುದೇ"

—ಒಂದು ಗಂಟೆ ನಾನು ಕಾಯಿಸಿದೆನಂತೆ!!!

ಒಂದು...........ಗಂಟೆ !!!!

—ಕುಮಾರ್.



ಗಡವ :—"ನಮ್ಮ ಕಾಲಕ್ಕೇ ಹೀಗೆ....ಕಡಲೆಕಾಯಿ ಹಾಲು, ಕೆಸವಿನಗೆಡ್ಡೆ ಅನ್ನ.... ...
ನಮ್ಮಕ್ಕಳ ಕಾಲಕ್ಕೆ ತೊಗಟೆ ಅನ್ನ—ಸೊಪ್ಪಿನ ಹಾಲೇ ಗತಿ ಅಂತ ಕಾಣುತ್ತೆ."

# ಪುರೋಹಿತರ ಪ್ರಲಾಪ

## (ಮದುವೆ ಚಪ್ಪರದಲ್ಲಿ)

---

ಕೋಲಾಹಲವಂಗೈದು ರಂಪವೆಬ್ಬಿಸುತಿರುವ ಪುಟಾಣಿ ಪೋರರಿರಾ, ನೀವು ಕಂಡಿರಾ? ನೀವು ಕಂಡಿರಾ?

ಮಯೂರ ಕಂಠದಿಂ ಕಲಕಲಿಸುತಿರುವ ಲಲನಾಮಣಿಗಳಿರಾ, ನೀವು ಕಂಡಿರಾ, ನೀವು ಕಂಡಿರಾ?

ಕರ್ಣಕುಹರವಂ ಭೇದಿಸುತಿರುವ ನಾಗಸ್ವರ ಕೋವಿದರಿರಾ, ನೀವು ಕಂಡಿರಾ, ನೀವು ಕಂಡಿರಾ?

ಬೆವರಿಳಿಸುತ್ತ ಸವುಟು ಸಟ್ಟುಗಗಳ ತಿರುವುತಲಿರುವ ನಳರಾಜರಿರಾ, ನೀವು ಕಂಡಿರಾ, ನೀವು ಕಂಡಿರಾ?

ಲ್ರೋ, ನಾಣಿ ವೆಂಕ ಶೀನರಿರಾ, ಪಾರು ಪತ್ರೀಗಾರರಿರಾ ನೀವು ಕಂಡಿರಾ, ನೀವು ಕಂಡಿರಾ?

ನೀವಾದರೂ, ಕೊಂಚ ನೀವಾದರೂ, ಹಾಳು ನಶ್ಯದ ಡಬ್ಬಿ ಎಲ್ಲಿಹುದೆಂದು ಕೊಂಚ ಹುಡುಕಿರಪ್ಪ, ಕೊಂಚ ಹುಡುಕಿರಪ್ಪ, ಓ ಮದುಮಕ್ಕಳಿರಾ!

—ರಾಮಕೃಷ್ಣ

---



# ವೇದಾಂತಿಗಳ ವೈಖರಿ

ಆಕೇನ—ಭಾಗೀರ್ತಮ್ಮನೋರ್ನ—ಎಷ್ಟೋ ದಿನಗಳಿಂದ ಬಲ್ಲೆ. ಸಾಧು ಸಾಧ್ವಿ, ದೈವಭಕ್ತೆ, ಬಡವರ ಬಂಧು, ಅನ್ನಿ ಸುತ್ತಿತ್ತು ಆಕೇನ ಕಂಡೊಡನೆ. ಪಾಪ ಆಕೇಗೆ ಪತಿವಿಯೋಗವಾಯ್ತು ಅಂತ ಪೇಪರ್‌ನಲ್ಲಿ ನೋಡಿ ಬಲುದುಃಖವಾಯ್ತು. ಅಷ್ಟರಲ್ಲಿ ನಮಗೆ ಈ ಊರಿಗೆ ವರ್ಗವಾಯ್ತು, ಅಕಸ್ಮಾತ್ ಮನೇ ಭಾಗೀರ್ತಮ್ಮ ನೋರ ಮನೆಬೀದೀಲೇ ಸಿಕ್ಕಿತು!

ಬೆಳಗಿನ ದಿನವೇ ಹೋದೆ, ಆಕೇನ ಮಾತಾಡಿಸೋಕೆ, ಅವರ ಬಂಗಲೆಗೆ. ಭೂಗತವಾಗಿ ಹೋಗಿದ್ದರು ಭಾಗೀರ್ತಮ್ಮನೋರು! ಕರುಳುಕಿತ್ತು ಬಂತು ಆಕೇ ಭವಣೇನೋಡಿ. ಬೇಡಿ ಭಾಗಮ್ಮನೋರೆ, ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳೋದು ಸರಿಯಲ್ಲ, ಭೂಮ್ತಾಯಾಣೆ, ನಿಮ್ಮ ದಮ್ಮಯ್ಯ! ಚೇತರಿಸ್ಕೊಳ್ಳಿ!" ಅಂತ ಅಂಗ ಲಾಚಿದೆ. "ಅಯ್ಯೋ ಅಯ್ಯೋ! ನಾನೇನು ಚೇತರಿಸ್ಕೊಳ್ಳೀ ತಾಯಿ! ದೇವರಿಲ್ಲ ದಗುಡಿಯಾಕೇ? ದೀಪವಿಲ್ಲದ ಸೊಡಿಲು ಏನು ಮಾಡಲಿಕ್ಕೇ? ಯಾವ ಪದಾರ್ಥ ಕ್ಕಾಗಿ ಈ ಬಾಳು ಹೇಳು. ಭೂಮಿ ಬಿರಿದು ಬಾಯ್ಬಿಡಬಾರದೇ! ಬರಸಿಡಿಲು ಬಡಿದು ನನ್ನ ಬಲಿ ತೆಗೆದ್ಕೋಕೂಡದೇ!....ಹುಂ....ಇನ್ನು ಉಳಿದಿರೋದಿಷ್ಟೇ— ದಿನಗಳೆಣಿಕೆ, ಅವರನ್ನು ಹಿಂಬಾಲಿಸುವ ಹಾರೈಕೆ!...." ರೋಧಿಸಿತು ಪ್ರಾಣಿ. ಕಣ್ಣೀರುಕೋಡಿಹರಿಸುತ್ತಾ ಮನೆಗೆ ಹಿಂದಿರುಗಿದೆ.

ನಮ್ಮ ಹುಡುಗೀಗೆ ಹೂವಿನಹುಚ್ಚು. ಅದಕ್ಕೆ ತಕ್ಕಹಾಗೆ ನಮ್ಮ ಬೀದೀ ಲಂತೂ ಬಲು ಥಂಡಿ ಹೂವು. ನಿತ್ಯ ಬೆಳಗ್ಗೆ ಏಳು ಘಂಟೆಗೆ ಸರಿಯಾಗಿ ಒಬ್ಬ ಮುದುಕ ಹೂ ತರುತ್ತಾನೆ. ಎಲ್ಲಾ ಬಗೆ ಹೂ—ಮಲ್ಲಿಗೆ, ಜಾಜಿ, ಪಟಿಕಗಳು, ಸಂಪಗೆ ಎಲ್ಲಾ ವಿತರಣೆಯಾಗಿ ಪೊಟ್ಣ ಕಟ್ಟಿತರುತ್ತಿದ್ದ. ಮರುಗ, ದವನ ಸಹ ಸಿಕ್ಕುತ್ತಿತ್ತು ಅವನ ಬಳಿ. ನಮ್ಮ ಹುಡುಗೀ ಆನಂದವೇ ಆನಂದ! ನಿತ್ಯ ಕೊಳ್ಳುತ್ತಿದ್ದಳು.

ಆದರೆ ಒಂದು. ಖರೀದೀ ಬಲುನಿರುಕು ಅವನ ಹತ್ತಿರ. ಒಂದೇ ಬೆಲೆ! ನನಗೆ ಕೋಪಬಂತು. ಒಂದು ದಿನ ಕೇಳಿದೆ, "ಏನಯ್ಯಾ, ನಿತ್ಯ ತೆಗೆದ್ಕೊಳ್ಳೋರಿಗೆ ಮೂರು ಕಾಸಾದ್ರೂ ಬಿಡಬೇಡ್ವೇ! ರಾಜೀ, ಸಂಪಿಗೆಪೊಟ್ಣಕ್ಕೆ ಒಂದೊಂದಾಣೆ

ಹಾಗೆ ಕೊಡು, ಮಲ್ಲಿಗೇಕುಚ್ಚು ಒಂದೂವರಾಣೆ ಹಾಗೆ ಕೊಡು, ಮಲ್ಲಿಗೇ ಕುಚ್ಚು ಒಂದೂವರಾಣೆ ಅಷ್ಟೆ!" ಅಂದೆ. ಮುದುಕ ಬೆದರಿಹೋದ. "ಇಲ್ಲ ತಾಯಿ, ಆಗೊಲ್ಲ ತಾಯಿ! ನಾನೇನೋ ಕೊಟ್ಟೇನು, ಆದ್ರೆ ಅಮ್ಮಾವ್ರು ಸುಮ್ನೆ ಬಿಡಾಕಿಲ್ಲ!" ಅಂದ. "ಯಾವಮ್ಮಾವ್ರೋ?" ಎಂದೆ. "ಅದೇಕನ್ರವ್ವಾ, ಎದುರ್ಸಾಲಿನಲ್ಲಿಲ್ವಾ ಹಳದೀ ಬಂಗ್ಲಿ....ಬಾಗಮ್ಮನೋರೋ ಏನೋ ಅಡ್ರೆಸ್ಸು, ಅವರ ತೋಟದ್ದೇ ಕನ್ರವ್ವಾ ಈ ಊವೆಲ್ಲಾ" ಅಂದ. "ಭಾಗೀರ್ತಮ್ಮನೋರ ಮನೇದೇ?" ಎಂದೆ ಆಶ್ಚರ್ಯದಿಂದ. "ಮತ್ತಿನ್ನೇನ್ರವ್ವಾ ನಾನು ತೋಟಾಮಾಡಿನ್ನೀ ಅನ್ಕೊಂಡ್ರಾ? ....ಆಯಮ್ನೇ ಖುದ್ ಈ ಪೊಟ್ಣಗಳ್ನ ಕಟ್ಟಿಕೊಡೋದು, ಆಯಮ್ನೇ ಹೂ ಕೊಯ್ದು ಕುಚ್ಚುಕಟ್ಟಿ ಮಡಗೋದು ಐದು ಗಂಟ್ಗೇ ಎದ್ದು. ಕಾಸಿಗ್ಕಾಸಿಗೆ ಲೆಕ್ಕಾ ಒಪ್ಪಿಸ್ಬೇಕು. ' ಒಂದು ಬಿಲ್ಲೇ ಏನಾದ್ರೂ ಯತ್ಯಾಸಬಂದ್ರೆ ಚಮ್ಡಾ ಸುಲಿದ್ಬಿಟ್ತಾಳು ಪುಣ್ಯಾತ್ಗಿತ್ತೀ! ನಿಮ್ಮ ದಮ್ಮಯ್ಯ ದುಡ್ಡು ಸರೀಗ ಕೊಟ್ಬಿಡ್ರವ್ವಾ" ಎಂದು ಎರಡು ಕೈನೂ ಜೋಡಿಸಿ ಕೇಳಿದ.

ಹತ್ತು ನಿಮಿಷ ದಂಗುಬಡಿದು ನಿಂತಿದ್ದೆ!

* * *

ನಮ್ಮ ಮನೇಲಿ ನಲ್ಲಿ ತಿರುಗಿಸಿದರೆ ಮಗ್ಗಲುಮನೇ ನಲ್ಲೀಲಿ ನೀರು ಸೊನ್ನೆ. ಅದ್ಯಾವ ಪೈಪುಗಾರನ ಚಮತ್ಕಾರವೋ, ಇದೊಂದು ವಿಚಿತ್ರ ನಮ್ಮೆರಡು ಮನೆಗೂ.

ಅಂದು ದೀಪಾವಳೀ ಬೆಳಿಗ್ಗೆ. ಎಣ್ಣೆ ನೀರಿನ ಹಾವಳಿ. ಮಗ್ಗುಲಮನೆ ಯಾಕೆಗೂ ನನಗೂ (ಕೈ ಕೈ ಅಲ್ಲ!) 'ಬಾಯ್ ಬಾಯ್' ಹತ್ತಿತು. "ಅಳಿಯಂದಿರ ನೆತ್ತಿಮೇಲೆ ಎಣ್ಣೆ, ಹಂಡೆಯಲ್ಲಿ ನೀರು ಸೊನ್ನೆ!- ಬಿಡ್ರಿ ನೀರ್ನ!" ಅಂತ ಆಕೆ ಅವಾಂತರ. "ನಿಮ್ಮಳಿಯ ನಿಮಗೆ ಹೆಚ್ಚಾದ್ರೆ, ನಮ್ರಂಗು—ಮೊನ್ನೆ ತಾನೇ ಜ್ವರಬಿದ್ದು ಎದ್ದೋನು, ಬಚ್ಚಲಲ್ಲಿ ಕೂತಿದಾನಲ್ಲಾ, ಏನ್ಮಾಡ್ಬೇಕೂಂತೀರಿ?" ನನ್ನ ಎದುರುತ್ತರ. ನೆತ್ತಿ ಎಣ್ಣೆ ಅಳಿಯನ್ನೂ, ಬಚ್ಚಲಲ್ಲಿದ್ದ ರಂಗುವನ್ನೂ ಅಲ್ಲೇ ಬಿಟ್ಟು ಅರ್ಧಗಂಟೆ ಗೋಡೆ ಈ ಮಗ್ಗುಲು ಆ ಮಗ್ಗುಲಲ್ಲೇವಾದಿಸಿದೆವು. ಅಷ್ಟರಲ್ಲಿ ಮಗ್ಗಲು ಮನೆ ತಾತ ಬಂದರು. "ಛೇ, ಛೇ! ಯಾಕಮ್ಮಾ ಹೀಗೆ ಕಿತ್ತಾಡ್ತೀರಿ? ಇಬ್ಬರೂ ಸವರಿಸ್ಕೊಳ್ಳಿ, ಎಲ್ಲರೂ ನೀರು ಹಾಕ್ಕೋಬೇಕಾದ್ದೇ, ಸರಿ....ಅಷ್ಟಕ್ಕೂ ಈ ಹಬ್ಬ ಹುಣಿಮೇ ಅಂದ್ರೆ ಏನೂ ಅಂದ್ಕೊಂಡ್ರಿ? ಎಲ್ಲ ಈ ಹಾಳು ಹೊಟ್ಟೆಗಾಗಿ, ಕಣ್ಣಿನ ಬಯಕೆಗಾಗಿ. ದೇವರ್‍ಹೆಸರ್‍ನೇಳಿ ಬಗೆ ಬಗೇ ಭಕ್ಷ್ಯಮಾಡ್ಕೊಂಡು ತಿನ್ನೋದು, ಕಣ್ಣಿಗೆ ಬೇಕಾದ ಬಟ್ಟೆಬರೆ ಉಟ್ಕೊಳ್ಳೋದು, ಈ ಅವಕಾಶ ಕಲ್ಪಿಸಿಕೊಳ್ಳಲಿಕ್ಕಾಗಿ, ಈ ಹಬ್ಬಗಳ ನೆವ ಹೂಡಿರೋದು ಕಂಡ್ರಾ? ಇದಕ್ಕೆ ಇಷ್ಟು ವ್ಯಾಜ್ಯವ್ಯಾಕೆ ಹೇಳೀಮ್ಮ?" ಎಂದು ಸಣ್ಣವೇದಾಂತೋಪನ್ಯಾಸವನ್ನೇ ಕೊಟ್ಟುಬಿಟ್ಟರು. ನಾಚಿ ತಲೆತಗ್ಗಿಸಿಕೊಂಡು, ರಂಗೂನ ವಿಚಾರಿಸಿಕೊಳ್ಳಕ್ಕೆ ಹೋದೆ!

ಸಂಜೆ ಎಲ್ಲೆಲ್ಲೂ ಪಟಾಕಿ ಅವಾಂತರ. ನಮ್ಮ ಮನೇ ಹುಡುಗರು ನಾಲ್ಕು ರೂಪಾಯಿ ಉರಿಸಿದರು. ನೆರೆಮನೇಲೂ ನಡೀತಿತ್ತು ಹಾವಳಿ. ನಮ್ಮ ಮನೇ ದೆಲ್ಲ ಮುಗಿದಮೇಲೆ, ಅವರ ಮನೇದನ್ನ ನೋಡುತ್ತಾ ನಿಂತೆವು. ಎಲ್ಲರ ಕೈಲೂ ಮತಾಪು, ಸುರ ಸುರ ಬತ್ತಿ ಇತ್ಯಾದಿ. ಮೆಟ್ಟಲು ಮೇಲೊಂದು ಪೆಟ್ಟಿಗೆ ಭರ್ತಿ ಚಿತ್ರ ವಿಚಿತ್ರಗಳು. ಆದರೆ ಪಾಪ ಹುಡುಗರು ಸ್ವಲ್ಪ ಸಣ್ಣವರು. ಉರಿಸಲು ಹೆದರಿಕೆ.

ತಾತ ಬಂದರು. " ಅಯ್ಯೋ ಅಯ್ಯೋ ಮಕ್ಕಳಿರಾ ? ಅನ್ಯಾಯವಾಗಿ ಈ ಅರೆ ಘಳಿಗೇ ತಮಾಷೇಗೆ ಆಶೆಪಟ್ಟು, ಎಷ್ಟೋ ಹಣ ಅನ್ಯಾಯ ಮಾಡ್ತೀರೋಪ್ಪ! ಎಲ್ಲಾ ಕ್ಷಣಿಕ! ಕ್ಷಣಿಕ!....ಅಲ್ವೋ ವೆಂಕು, ನಿನಗೆ ಬರತ್ತೇಪ್ಪ ಆ ವಿಷ್ಣು ಚಕ್ರ ತಿರಿಗ್ಸೋಕ್ಕೆ. ಹೋಗ್ಲಿ ಇಲ್ಲಿತಾ, ನಾನಾದ್ರೂ ಹಿಡಿದ್ಕೊಂಡ್ಹು ತೋರಿಸ್ತೀನಿ.... ನೋಡಿದ್ಯಾ, ಹೀಗೆ....! ಲೋ ಲೋ ರಾಮೀ ರಾಮೀ! ಹಾಳ್ಮಾಡ್ತಿದೀಯಲ್ಲೋ ಹಾರಾಡಿಸ್ಲಿಕ್ಕೆ ಬರದೇ ಏರೋಪ್ಲೇನ್‌ನಾ!....ತಾರೋ ಇಲ್ಲಿ, ನಾನಾದ್ರೂ ಹಾರಿ ಸ್ಕೊಡ್ತೀನಿ!....ಪಟಾಕೀಸರ ನೀನು ಹಚ್ಚುತ್ತೀಯೇನೋ ನಿಜವಾಗಿ ಪಾಂಡು? ಪಾಪ, ನಿನಗೆಲ್ಲಿಂದ ಬಂದೀತು ಹೇಳು ಧೈರ್ಯ....ಹೋಗಲಿ ಬಿಡು ಅದೂ ಹಚ್ಕೊ ಡೋಣ....!"

ತಾತ ಹೀಗೇ ಮಕ್ಕಳಿಗೆ ಸಹಾಯಮಾಡ್ತಿದ್ರು. ನಾನು ದೇವರಿಗೆ ದೀಪಹಚ್ಚಿ ಡೋಣ ಅಂತ ಒಳಕ್ಕೆ ಬಂದುಬಿಟ್ಟೆ. ಅರ್ಧ ಗಂಟೆಯಾಯ್ತು. ನೆರೆಮನೇ ಹುಡು ಗರು ಆರ್ಭಟಿಸ ತೊಡಗಿದ್ರು. ಚಿಕ್ಕಮಕ್ಕಳು ಅಳುತ್ತಿದ್ದುವು. ಸ್ವಲ್ಪದೊಡ್ಡವು ಅರಚುತ್ತಿದ್ದುವು. ಏನಾಯ್ತೋ ಏನೋ ಅಂತ ಓಡಿಹೋದೆ.

ತಾತನ ಕೈಲಿ ಎರಡು ಸುರ ಸುರಬತ್ತಿ ಉರಿಯುತ್ತಿತ್ತು. ಕಂಕುಳಕೆಳಗೆ ಮೆಟ್ಟಲು ಮೇಲಿಟ್ಟಿದ್ದ ಪೆಟ್ಟಿಗೆ ಭದ್ರವಾಗಿ ಸೆಕ್ಕಿಸಿಕೊಂಡಿದ್ದರು. ಅವರ ಕೈಯಿಂದ ಏನನ್ನಾದರೂ ಕಿತ್ತುಕೊಳ್ಳಬೇಕೆಂದು ಹುಡುಗರು ಹರಸಾಹಸಮಾಡುತ್ತಿದ್ದರು. ಆದರೆ ತಾತ, ಅಲುಗಲ್ಲಾಡದೆ, ತದ್ವೈಕ ಚಿತ್ತರಾಗಿ, ಒಂದೊಂದಾಗಿ—ಭೂ ಚಕ್ರ, ಶಿವಚಕ್ರ, ಹರಚಕ್ರ, ಮತಾಪು, ಪಟಾಕೆ, ಹಾವು, ಜಿಂಕೆ, ಕಾರು, ರೈಲು, ಏರೋ ಪ್ಲೇನು, ಹಾರೋಹಕ್ಕಿ—ಹಚ್ಚುತ್ತಾ ನಿಂತಿದ್ದರು !

ಇಂಥಾ ವೇದಾಂತವೇ ಅಲ್ಲವೇ ಅಧಿಕಾರದ ಆಯ್ಕೆಗೆ ನಿಂತವರದ್ದು— " ನನಗೆ ಪದವೀ ಆಶೇನೇ ಇಲ್ಲಾ"ಂತ?

—ಸುನಂದಮ್ಮ.

—— ೦ ——

# ಒಂದ್ ಹನಿ

ಹಸೆ ಮಣೀ ಹಾಸ್ತು
ಹಾರೋರ ಮಂತ್ರ ಹರೀತು
ಹೋಮದ ಹೊಗೆ ಬೀಸ್ತು
ಅಕ್ಕನ್ ಕಣ್ಣು ಹನೀತು
(ಪಕ್ಕದ್ ಕಣ್ಣು ನೋಡಿತೇ ?)
ತುಟಿ ಹರ್ಷ ಚಿಮ್ತು !
ತುಟಿ ಮೇಲೊಂದ್ ಹೂವಾದ್ರೆ
ಕಣ್ಣಲ್ಲೊಂದ್ ಮುತ್ತು !

ಆ ಹೂ, ಮತ್ತೆ ಆ ಮುತ್ತು,
ಅಪ್ಪನ್ಕಣ್ಣೀಗ್ ಬಿತ್ತು
ಎದೇಲಿ ಹರ್ಷ ಉಕ್ತು
ತುಟಿ ಮಾತ್ರ ಬಿಗೀತು
(ಕೈ ಕೊಂಚ ನಡುಗಿತೇ?)
ಪಂಚಪಾತ್ರೆ ಜಾರ್ತು
ಕಣ್ಣಿಂದ್ ಒಂದ್ ಹನಿ ಮಾತ್ರ
ಇಳೀತಾನೇ ಇತ್ತು.

—ರಾಮಕೃಷ್ಣ.

—o—



# ಜಡ್ಜಿ ಕೊಟ್ ತೀರ್ಪು

---

ಯಾರೋ ಒಬ್ನಂತೆ. ಪಾಪ—ಬಡವಾಂತೆ. · ಕದಿಯೋದಕ್ಕೆ ಓದ್ನಂತೆ.

ಆ ಊರಿನ್ ಸೌಕಾರ್ನಂತೆ. ಭಾರಿ ಶ್ರೀಮಂತ್ನಂತೆ. ಅರಮನೇಂಥ ಮನೆಯಂತೆ. ಕಳ್ಳ ಬಲೆ ಉಪಾಯ್ದಿಂದ ಗೋಡೆಮ್ಯಾಗೆ ಏರಿದ್ನಂತೆ. ಮಾಡಿ ಮೇಲಿನ್ ಕಿಟಕೀ ಸರಳನ್ನ ಇಡುಕೊಂಡನಂತೆ. ಆಗಲಂತೆ; ಗಂಡಾಂತರವಾಯ್ತಂತೆ.

ಇಡೀ ಕಿಟಕೀನೇ ಕಳ್ಳನ್ ಕೈಗೆ ಕಿತ್ಕೊಂಡ್ ಬಂತು! ಕಳ್ಳ ಧೊಪ್ಪಂತ ಕೆಳೀಗ್ ಬಿದ್ದ. ಅವನ್ ಕಾಲು ಮುರದ್ಹೋಯ್ತು.

ಆವಾಗ ಕಳ್ಳ ಏನ್ಮಾಡಿದ ಗೊತ್ತೆ? ಸೌಕಾರನ್ ಮೇಲೆ ದಾವಾ ಊಡಿದ್ನಂತೆ ಜಡ್ಜಿ ಕೂಡೆ. ಏನಂದ ಗೊತ್ತೆ—"ಬಡವಾ ಮಾಸಾಮಿ, ಈ ಸೌಕಾರನ್ ಮನೇಗೆ ಕದಿಯೋದಕ್ಕೇಂತ ಓದೆ. ಗೋಡೇನ ಅತ್ಬಿಟ್ಟು ಕಿಟಕೀ ಸರಳನ್ನ ಭದ್ರವಾಗಿ ಇಡಕೊಂಡ್ನೊ ಇಲ್ವೋ ಮಾಸಾಮಿ, ಕಿಟಕೀನೇ ಗೋಡೇನ ಬುಟ್‌ಬುಟ್ಟು ನಂಜೊತೀಗೇ ಬಂತು. ನಾನ್ ಕೆಳಿಕ್ಕೆ ಬಿದ್ದೆ. ಕಾಲ್ ತುಂಡಾಗಿದೆ ಮಾಸಾಮಿ. ಆ ಕಿಟಕೀನ ಗೋಡೇಲಿ ಭದ್ರವ್ಹಾಗಿ ಕೂರಿಸ್ದೆ ಇದ್ದದ್ದಕ್ಕೆ ಸೌಕಾರ್ನಿಂದ ದಂಡಾ ಕೊಡಿಸ್ಬೇಕು"—ಎಂಗಿದೆ ಕಳ್ಳನ್ ದೂರು!

ಆವಾಗ ಜಡ್ಜಿ ಸೌಕಾರನ್ನ ನೋಡ್ಬಿಟ್ಟು ಏಳ್ತಾನೆ "ನೀನೇನೇಳ್ತೀಯಪ್ಪಾ ಸೌಕಾರ. ಈತ ಬಡವಾಂತೆ. ನಿನ್ಮನೇಗೆ ಕದಿಯೋದಕ್ಕೆ ಬಂದ್ನಂತೆ. ಮನೇನ ನೀನು ಭದ್ರವಾಗಿ ಕಟ್ಟಿಸ್ದೆ ಇದ್ದಿದ್ರಿಂದ ಈತ ಬಿದ್ಬಿಟ್ನಂತೆ, ಕಾಲ್ಮುರುಕೊಂಡನಂತೆ. ನೀನೇನಂತೀಯ ಇದಕ್ಕೆ?"

ಆವಾಗ ಸೌಕಾರ ಏಳಿದ್ನಂತೆ "ಆತ ಬಿದ್ದಿದ್ರಲ್ಲಿ ನಂದೆಲ್ಲಿದೆ ತಪ್ಪು ಮಾ. ಪ್ರಭೋ. ಕಿಟಕಿ ಮಾಡ್ದೋನ್ ಒಬ್ಬ ಬಡಗಿ ಮಾ ಪ್ರಭೋ"

"ಅಂಗೇನು!" ಆ ಬಡಗೀನ ಇಡಕೊಂಡ್ ಬಂದ್ರು. ಬಡಗಿ ನಡ ನಡಗ್ತಾ ಅಡ್ಡ ಬಿದ್ಬಿಟ್ ಏಳ್ತಾನೆ" ಕಿಟಕಿ ನಾನ್ ಮಾಡಿದ್ ನಿಜಾ ಮಾಸಾಮಿ. ಕಿಟಕೀ

ಗೇನಾಗೇದೆ? ಸೊಗ್ಸಾಗಿದೆ. ಭದ್ರವಾಗೇ ಇದೆ. ಆ ಮೇಸ್ತ್ರಿ ಅದನ್ನ ಗೋಡೇ ಒಳಕ್ಕೆ ಕೂರ್ಸ್ನೋವಾಗ ಭದ್ರವಾಗಿ ಕೂರಿಸ್ದೇ ಇದ್ರೆ ತಪ್ ನಂದೇ ಮಾಸಾಮಿ?"

ಸರಿ. ಜಡ್ಜಿ ಮೇಸ್ತ್ರೀನ ತರಿಸ್ದ ಪೋಲೀಸ್ನೋರಿಂದ.

ಮೇಸ್ತ್ರಿ (ಬಲಿ ಕೊರಮ) ಏಳ್ತಾನೆ "ಮಾ ಪ್ರಬೋ, ನಾನೀ ಕಿಟಕೀನ ಗೋಡೇಲಿ ಕೂರಿಸ್ತಾ ಇದ್ದೆ. ಆ ವೊತ್ಗೇನಾತಂತೀರ ಮಾ ಪ್ರಬೋ—ಒಬ್ಬಾಕೆ —ಉಡ್ಗಿ—ಅಂಗೆ ಆಧ್ಬಿಟ್ ಓದ್ಳು. ಆಕೆ ಉಟ್ಟಿದ್ ಸೀರೇನೋ ಬಣ್ಬಣ್ಣದ್ದು. ಚಿಟ್ಟೆ ಗುಂಪ್ಕಟ್ಕೊಂಡ್ ಆರಾಡ್ತ ಓದ್ರೆ ಎಂಗಿರತ್ತೆ ಮಾ ಪ್ರಬೋ—ಅಂಗ್ ಉಡ್ಗಿ ಆದ್ ಓದ್ಳು. ನನ್ ಮನ್ಸು ಕಿಟಕೀಮೇಲುಳಿಯುತ್ಯೆ, ಗೋಡೇ ಮೇಲುಳಿಯುತ್ಯೆ? ಉಡ್ಗೀಜತೇಗ್ ಆರ್ ಓಯ್ತು. ಕಿಟಕಿ ಭದ್ರವಾಗಿ ಕೂರ್ಲಿಲ್ವೋ ಏನೋ. ಆದ್ರೆ ತಪ್ ನಂದೇ ಮಾ ಪ್ರಬೋ? ಉಡ್ಗೀದಲ್ವೆ ?

ಜಡ್ಜಿ ಉಡ್ಗೀನೂ ತರಿಸ್ದ.

ಆಕೆ ಥಳಕ್ತಾ ಬಳಕ್ತಾ ಏಳ್ತಾಳೆ "ನನ್ನ ರೂಪ ಅಲ್ಲ ಸಾಮಿ, ನಾನುಟ್ಟಿದ್ ಸೀರೇ ಮೇಸ್ತ್ರಿ ಮನ್ಸನ್ನ ಅಡ್ಡಕ್ಕೆಳ್ದಿರ್ಬೇಕು...."

ಆವಾಗ ಮೂಲೇಲಿ ನಿಂತಿದ್ ಮೇಸ್ತ್ರಿ ಏಳ್ತವನೆ ಮದ್ಯ ಬಾಯಿ ಆಕಿ "ನಿಜ ನಿಜ ಮಾ ಪ್ರಬೋ ಆಕೆ ಉಟ್ಟಿದ್ ಸೀರೇನೇ ನಂಗ್ ಕೈಕೊಟ್ಟಿದ್ದು. ಆಕೆ ರೂಪಾ ಅಲ್ಲ. ಖಂಡಿತ್ವಾಗಲೂ ಅಲ್ಲ...." ಜಡ್ಜಿ ಕಣ್ಕೆರಳಸ್ದ. ಮೇಸ್ತ್ರಿ ಸುಮ್ಕಾದ.

ಉಡ್ಗಿ ಮುಂದಕ್ಕೇಳ್ತಾಳೆ—"ಸೀರೇಗೆ ಅಂಗೆಲ್ಲ ಬಣ್ಣ ಆಕ್ದೌನಿದಾನಲ್ಲ ಅವನ್ತಪ್ಪು"

ಪಾಪ. ಆ ಬಣ್ಣ ಆಕೋನ್ನ ಎಳದ್ ತಂದ್ರು.

ಆತ್ನೋ ಸುದ್ದ ಪಸು. ಬೆಪ್ ಜಂತು. ಏಳ್ತಾನೆ ಆತ ನಡನಡಗ್ತಾ "ಬುದ್ಧೀ, ಸೀರೇಗೆ ಅಂತಾ ಬಣ್ಣಾ ಆಕ್ದ್ರೆ ಈಟೆಲ್ಲ ಆನಾಹ್ತ ಆಗತ್ತೇಂತ ನಂಗೊತ್ತಿರಲಿಲ್ಲ ಬುದ್ಧಿ. ತಪ್ದೆ ಬುದ್ಧಿ. ಅಡ್ಡಕ್ಬೇಳ್ತೀನಿ ಚೆಮಿಸ್ಬೇಕ್ ಬುದ್ಧಿ"

ಆವಾಗ ಜಡ್ಜಿ ಎಗರಿಬಿಟ್ಟು ಕಿಚ್ತಾರ್ನೆ" ಅಪ್ರಾದಿ ನೀನೇ" ಅಂತ. ಪೋಲೀಸ್ನೋರನ್ನ ಕರ್ದು "ಎಳ್ಕೊಂಡೋಗ್ರೋ ಇವನ್ನ. ಕರ್ಕೊಂಡೋಗಿ ಇವನಂಗ್ಡಿ ಬಾಕ್ಲಲ್ಲೆ ನೇಣ್ ಆಕಿ ಇವನ್ ಕತ್ತೀಗೆ. ಇದೇ ಸಿಕ್ಸೆ ಇವಂಗೆ"

ಅಮ್ಮನ್ಮಾ. ಅಂತೂ ಅಪ್ರಾದಿ ಸಿಕ್ದ. ಕೇಸ್ಮುಗೀತು. ತೀರ್ಪು ಕೊಟ್ಬಿಟ್ಟು ಜಡ್ಜಿ ಗೆದ್ದ!

ಕೇಸ್ಮುಗೀತೆ? ಮುಗೀಲಿಲ್ಲ. ಅಪ್ರಾದಿ—ಸರಿಯಾದೋನು—ಇನ್ನೂ ಸಿಗ್ಲಿಲ್ಲ ಬಣ್ಣ ಆಕೋನ್ನ ಎಳ್ಕೊಂಡೋದ ಪೋಲೀಸ್ನೋರು ಇಂದಕ್ಬಂದು ಏಳ್ತಾರೆ "ಮಾ ಪ್ರಬೋ ಅವನಂಗ್ಡಿ ಬಾಕ್ಲು ಗಿಡ್ಡ. ಈ ಆಸಾಮೀನೋ ಬಲೆ ಉದ್ದ. ಬಾಕ್ಲಲ್ಲಿ ಇವನ್ನತ್ತಿಗೆ ನೇಣಾಕಿದ್ರೆ ಮಂಡಿನೆಲಕ್ತಾಗ್ತು. ಮುಂದಕ್ಕೇನಪ್ಣೆ ಮಾ ಪ್ರಬೋ.

ಜಡ್ಜೀಗೆ ರೇಗ್ತು. ಆತ ಅಲ್ಕಡ್ದ—"ಓಗ್ರೋ ಓಗ್ರೋ ಬೆಪ್ತಕಡಿಗಳ್ರಾ! ಊರಲ್ಲಿ ಬಣ್ಣ ಆಕೋರ್ ಯಾರಿದಾರೆಂತ ಗೊತ್ತಿಲ್ವೆ ಮುಟ್ಠಾಳ್ರಾ! ಓಗಿ. ಬಣ್ಣ ಆಕೋರಲ್ಲಿ ಕುಳ್ಳಗಿರೋ ನೊಬ್ಬನ್ನ ಇಡ್ಕೊಂಡ್ ತಂದು ಆ ಬಾಕ್ಲೀಗೆ ನೇಣ್ ಆಕಿ. ಓಡೋಗಿ ನಿಲ್ಬೇಡಿ ಇಲ್ಲಿ" ಅಂತಂದ.

"ಅಪ್ಣೆ ಬುದ್ದಿ" ಅಂದ್ಬಿಟ್ಟು ಪೋಲೀಸ್ನೋರು ಓಡ್ದ್ರು—ಬಣ್ಣ ಆಕೋ ಜನಗಳಲ್ಲಿ ಕುಳ್ಳಗಿರೋನು ಯಾವ್ರೋನಿದಾನೇಂತ ಉಡುಕೋಕೆ!

(ಇಂಗ್ಲೀಸ್ನೋರ್ದಂತೆ ಕತೆ ಇದು. ನಮ್ ಯಜಮಾನ್ರ ಮಕ್ಳು ಸೀತಾಪತಪ್ನೋರು—ಬೆಂಗ್ಳೂರಲ್ಲಿ ಓದ್ತಿದಾರೆ—ಅವರೇಳಿದ್ ಕತೆ ಇದು)

—ಅಳ್ಳಿ ಗಮಾರ.

—o—




ನೋಡಪ್ಪ, ಕಿಟ್ಟೂ ಹೀಗೆಲ್ಲಾ, Silent Zoneನಲ್ಲಿ ಅಳಬಾರದು.

# ದಫೇದಾರ್ ದೇರಣ್ಣೋರು ೨

## ಚೋರಿ ಪತ್ತೆ

---

"ಟೌಲು" ಎಂದು ಕೂಗಿದರು ಕೈಮೇಲೆ ನೀರು ಬೀಳುತ್ತಲೆ ಶ್ರೀ ದ|| ದೇರಣ್ಣೋರು. ಬಳುಕುವ ಬಳ್ಳಿಯಂತೆ ಬಿಳಿಯ ಟೌಲು ಹಿಡಿದು ಬಾಗಿಲ ತೆರೆ ಸರಿಸಿ ಅರಳಿದ ಗುಲಾಬಿಯಂಥ ನಗು ಬೀರ್ಧುವ ಮುಖದೊಡಗೂಡಿ ಬಳಿಸಾರುವಳು ಸಾವಂತ್ರಿ ಎಂದಿದ್ದರು. ಆದರೆ "ಅಲ್ಲೇ ಹಗ್ಗದ ಮೇಲಿದೆ—ಅದು ಕೊಡೋಕೂ ನಾನೇ ಬರಬೇಕೆ?" ಎಂಬ ಶಬ್ದ ಹೊರಬಿತ್ತು. ಎತ್ತಿದ ಮುಖ ಇಳಿಸಿ ಹಗ್ಗದ ಬಳಿ ಹೋಗಿ ತಡಕಿ ಕಡೆಗೆ ಸಿಕ್ಕ ಬಟ್ಟೆಯಲ್ಲಿ ಕೈ ಬಾಯಿ ಒರಸಿಕೊಂಡರು—ಅದು ಅವರು ಉಡುವ ಪಂಚೆಯೇ ಆಗಿತ್ತು. "ಎಲೆ ಅಡಿಕೆ ತರಬಾರದೇನೆ ಸಾವಂತ್ರೀ.... ಹೊತ್ತಾಯ್ತು" ಎಂದು ಆರ್ಭಟಿಸಿದರೂ, ಪ್ರತ್ಯುತ್ತರವೇ ಇಲ್ಲ—ಇವರ ಕೂಗು ಆರ್ಭಟವೆಲ್ಲಾ ಪ್ರತಿನಿತ್ಯ ಭೋರ್ಗಲ್ಲ ಮೇಲೆ ಮಳೆ ಸುರಿದಂತೆ ಎಂದು ಅವರು ಬಲ್ಲರು. ಆದಷ್ಟೂ ಅವರ ಧಫೇದಾರಿತನ ಅದರಲ್ಲಿ ಈ ವ್ಯಾಧಿಯನ್ನು ಅಂಟಿಸಿತ್ತು. "ದರ್ಪ—ಶೌರ್ಯ—ಸಾಹಸ—ವ್ಯಕ್ತಿತ್ವ—ಕಾರ್ಯತತ್ಪರತೆ—ಇವಿಷ್ಟೂ ಪೋಲೀಸು ಅಧಿಕಾರಿಗಳಿಗೆ ಇರಲೇಬೇಕಾದ ಗುಣಗಳು" ಎಂದು ಸೂಪ್ರೆಂಟ್ರು ಸಾಹೇಬರು ಅಂದಾಗ ಇವಿಷ್ಟೂ ತನ್ನಲ್ಲಿವೆ ಎಂಬುದನ್ನು ಸಾವಂತ್ರಿಗೆ ಹೇಳಿದಾಗ ಆಕೆ ಮೂತಿ ತಿರುವಿ ಪುಸ್ಸೆ ಎಂದಿದ್ದಳು. ಆದರೆ ಮರುಕ್ಷಣವೆ ತಮ್ಮ ಸ್ವರೂಪವನ್ನು ಕನ್ನಡಿಯಲ್ಲಿ ನೋಡಿಕೊಂಡಾಗ ಆ ಕನ್ನಡಿ ದೇರಣ್ಣೋರ ಅಭಿಪ್ರಾಯವನ್ನೇ ಸಮರ್ಥಿಸಿತ್ತು. ಆ ಸಮರ್ಥನೆಯೇ ಅವರ ಈ ಎತ್ತರದ ಧ್ವನಿ—ತೆಳ್ಳಗಿನ ಉದ್ದ ಕತ್ತಿನ ಮೂಲಕ ಹಾದು ಗಾಣದಂಥಹ ಗಂಟಲ ಗಂಟನ್ನೂ ದಾಟಿ ಜಿಹ್ವೆಗಿಳಿದು ತುಟಿ ಮೂಲಕ ಭಾರಿ ಹುರಿ ಮೀಸೆಯನ್ನಾಡಿಸುತ್ತಾ ಕೀಚು ಪಾಚು ಎಂದು ಹೊರಬೀಳುತ್ತಿತ್ತು. ತುಟಿಗಳೆರಡನ್ನೂ ಕೆಂಪಗೆ ಮಾಡಿಕೊಂಡು ತುಂಬುಗಲ್ಲ ಬಾಯಲ್ಲಿನ ತಾಂಬೂಲದಿಂದ ಇನ್ನೂ ಉಬ್ಬಿಬಂದಿತ್ತು—ಬಿಳಿಯ ಮೂಗುಬೊಟ್ಟು ಸುರ್ ಎಂದು ಉಸುರೆಳೆದುಕೊಂಡಾಗ ಫಳಕ್ ಎಂದು ಹೊಳೆಯಿತು—ನೀಳ ತೋಳು ಬಡನಡು—ಉಬ್ಬು ಎದೆ ಹಾಯಿಸಿ ಸಾವಂತ್ರಿ ಬಂದಾಗ ದ|| ದೇರಣ್ಣೋರ ಕಣ್ಣು ಕುಕ್ಕಿದಂತಾಯ್ತು.

ಆಕಳಿಸುತ್ತಾ ಸಾವಂತ್ರಿ ಹಾಸಿದ ಮಂಚದಮೇಲೆ ಕುಂತಳು. ದೇರಣ್ಣೋರಿಗೆ ಹೊಟ್ಟೆ ತಳಮಳಸಿತು—ಆ ಘಳಿಗೆ ಈ ಪೋಲೀಸು ಕೆಲಸಕ್ಕೆ ರಾಜಿನಾಮೆಕೊಟ್ಟು ಈ ರಾತ್ರಿ ಮನೆಯಲ್ಲೇ ಕಳೆಯಲೇ ಎಂದು ಅನ್ನಿಸಿತು. ಕೈಲಿ ಹಿಡಿದ ಎಲೆ ಅಡಿಕೆ ತಟ್ಟೆಯಿಂದ ತಾಜಾ ಬೀಡಾಮಾಡಿ ದಫೇದಾರರಿಗೆ ಕೊಟ್ಟಳು.

"ಸಾವಂತ್ರಿ! ಎಲ್ಲೆಲ್ಲೂ ಕಳ್ಳತನ ವಿಪರೀತ ಆಗೊಯ್ತು—ಸುಮ್ಮನೆ ಜನ ಗೋಳಿಡ್ತಾರೆ....ಕಳ್ಳಬಡ್ಡಿ ಮಕ್ಕಳನ್ನ ಇವತ್ತು ಹಿಡಿದೇಬಿಡ್ತೀನಿ" ಎಂದರು ಮೀಸೆ ತಿರುವುತ್ತ. ಸಾವಂತ್ರಿ ಒಳಗೇ ನಕ್ಕಳು. ಈ ಮಾತನ್ನು ಗಂಡನ ಮನೆಗೆ ಬಂದ ಹೊಸದರಲ್ಲಿ ನಂಬಿದ್ದಳು—ಯಜಮಾನರ ಶೌರ್ಯಕ್ಕೆ ಮರುಳಾಗಿ ಮಾಲೆ ಹಾಕಿದ್ದಳು. ಆದರೆ ಇದಕ್ಕೂ ಹೆಚ್ಚು ಸಾಹಸದ ಮಾತು ಹೇಳಿದ್ದರು ದಫೇದಾರ್ರು. ದಫೇದಾರ್ರ ಶೌರ್ಯ ಸಾಹಸ ಎಲ್ಲಾ ಬಾಯಿಮಾತಲ್ಲೇ ಎಂದು, ಸಾವಂತ್ರಿಗೆ ಈಗ ಚೆನ್ನಾಗಿ ಮನದಟ್ಟಾಗಿದೆ; ಆದ್ದರಿಂದಲೇ ಅರಳಿದ ಹೂವಿನಂತೆ ನಕ್ಕು—" ನಿಮ್ಮ ಡ್ಯೂಟಿನೋ ಗೀಟೀನೋ—ಬೇಗ ಹೊರಡಿ ನನಗೆ ನಿದ್ರೆ........" ಎಂದು ಆಕಳಿಸಿ ಮಲಗಿದಳು—ದಫೇದಾರ್ರು ಪೇಟ ಕಟ್ಟುತ್ತಲೇ ಕನ್ನಡಿಯಲ್ಲಿ ಕಂಡ ಸಾವಂತ್ರಿಯ ಭಂಗಿನೋಡುತ್ತಾ "ಸಾವಂತ್ರಿ ಬಾಗಲ್ಹಾಕಿಕ್ಕೊ ನಾ ಹೋಗ್ತೀನಿ—ಮನೆಕಡೆ ಹುಶಾರ್...." ಎಂದರು.

"—ದಫೆದಾರ್ರ ಮನೆಗೆ ಕನ್ನ ಹಾಕಲಿಕ್ಕೆ—ಮೂರು ಕಣ್ಣು ಹಚ್ಚಿಕೊಂಡು ಬರಬೇಕು...."

"ಈಗಿನ ಕಳ್ರು ಖದೀಮರು ಕಣೇ....ರಾತ್ರಿ ಯಜಮಾನ್ರು ಬೀಟ್‌ಗೆ ಹೋಗಿರ್ತಾರೇಂತ—ಈಗೀಗ ಪೋಲೀಸ್‌ನೋರ ಮನೇಲಿ ಕಳ್ಳತನ ಸಲೀಸು ಅಂತ ಅವರಿಗೆ ಗೊತ್ತು—"

"ಸಲೀಸೇನೊ ಸಲೀಸೆ—ಆದರೆ ಕದಿಯೋಕೆ ಏನಿದೆ ಇಲ್ಲಿ—ಹಳೇಬೂಡ್ಸು ಹರಿದ ಖಾಕಿ ನಿಕ್ಕರ್ ಕದಿಬೇಕಷ್ಟೆ—" ಎಂದು ಹೊದ್ದುಕೊಂಡಳು—

"ಹ ಹ ಹ....ಅದು ನಿಜಾನ್ನು" ಎಂದು ದಫೇದಾರ್ರೂ ನಕ್ಕು ಬದಿಯಲ್ಲೇ ಇದ್ದ ಪೊಟ್ಣ ಜೇಬಿಗೆ ಸೇರಿಸಿದರು—ಘಂ ಎಂದು ಹಸನ್ ಪಕೋಡದವಾಸನೆ ಹೊರಟಿತು ಆ ಪೊಟ್ಣದಿಂದ.

ದೇರಣ್ಣೋರು ಹೊರಬಿದ್ದರು—ಸ್ವಾವಂತ್ರಮ್ಮ ಬಾಗಿಲ ಚಿಲಕ ಹಾಕಿದಳು.

ಸಾವಂತ್ರಿಗೆ ಗೊತ್ತಿತ್ತು—ಜೇಬಿಗೆ ಬಿಟ್ಟ ಪೊಟ್ಣ ಕರಗುತ್ತಲೇ ಏನೋ ನೆಪ ಹಾಕಿ ಮತ್ತೆ ಯಜಮಾನರು ಬಾಗಿಲು ತಟ್ಟುತ್ತಾರೆಂದು. ಆದರೆ ಈಚೆಗೆ ಯಾವ ಕೇಸೂ ಸಿಗದಪ್ರಯುಕ್ತ ಇವತ್ತು ಏನಾದರೊಂದು ಪತ್ತೆತರದೂದು ನಡೆಸಲೇಬೇಕಿತ್ತು

ದಪ್ಪನೆಯ ಓವರ್ ಕೋಟ್ ಹೊರಲಾರದೆ ಹೊತ್ತು—ಜೊತೆ ಭಾರೀ ಬೂಡ್ಸಿನಭಾರ—ಬೆಲ್ಟಿನ ಬಿಗಿತ—ಪೇಟದ ತೂಕ—ಇವೆಲ್ಲಾದನ್ನೂ ಹೊತ್ತದ್ದು—ರೈಲ್ವೆಸ್ಟೇಷನ್ ಕೂಲಿಗಿಂತ ಭಾರವನ್ನೆ ಹೊತ್ತಂತೆ ಆಗಿತ್ತು—ಪೇಟದಭಾರಕ್ಕೆ ಅವರ ಕೃಶಕಂಠ ಜೋಲಿ ಹೊಡೀತಿತ್ತು—ಕರಗ ಹೊತ್ತವನಂತೆ ಬ್ಯಾಲೆನ್ಸ್‌ಮಾಡಿ ಸಾಗಿದ್ದರು ಶ್ರೀ ದ|| ದೇರಣ್ಣೋರು. ಸ್ಟೇಷನ್ ಸೇರುತ್ತಲೇ ಕಾ|| ಪಕೀರಪ್ಪ ಶ್ರೀಯುತರನ್ನು ಸ್ವಾಗತಿಸಿದ. "ಐಯ್ಯಣ್ಣನಪೇಟೆ ಕಡೆ ಬಹಳ ಹುಷಾರಾಗಿರ್ರೊ---ಇವತ್ತು ರಾತ್ರಿ ನಾನೂ ಬರ್ತಿನಿ...." ಎಂದಾಗ ಕಾ|| ಪಕೀರಪ್ಪನವರು ತಲೆ ಹಾಕಿದರು. ದ|| ದೇರಣ್ಣನವರು—ಆಗಲೆ ಪಕೋಡವನ್ನು ಮೆಲುಕುತ್ತಿದ್ದರು.

ಚಿಟಿ ಚಿಟಿ ಮಳೆ, ಅಮಾವಾಸ್ಯೆ. ಬೀದಿ ದೀಪಗಳೆಲ್ಲಾ ಆರಿಹೋಗಿದ್ದವು—ರಾತ್ರಿ ಹನ್ನೆರಡರ ಸಮಯ. ಆ ಭಯಂಕರ ಕಾಳ ರಾತ್ರಿಯಲ್ಲಿ ಎಂತಹ ಗಂಡು ಗುಂಡಿಗೆಯೂ ಗಡಗಡನೆ ನಡುಗುವುದು ಸಹಜ, ಅಂಥಾದ್ದರಲ್ಲಿ ದೇರಣ್ಣೋರು ಹೊರಡುವದೆಂದರೆ ಸಾಮಾನ್ಯವೆ? ಆದರೂ ನಾವಂತ್ರಿ ಮುಂದೆ ಹೊಡೆದ ಬುರುಡೆ—ಕಾ|| ಪಕೀರಪ್ಪನ ಮುಂದೆ ಕೊಚ್ಚಿದ ಬಡಾಯಿ ನಿಜ ಎನಿಸಬೇಕಾಗಿದ್ದರೆ ಹೊರಡಲೇ ಬೇಕಿತ್ತು "ಕಳ್ಳಬಡ್ಡಿ ಮಕ್ಕಳಿಗೆ ಇಂಥಾ ಹೊತ್ತು ಬಲು ಮಜ....ಒಂದು ರೌಂಡು ಹೋಗಿಬಾ ಫಕೀರು...." ಎಂದು ಹೇಳಿದ್ದರು. ಕಾ|| ಪಕೀರಪ್ಪನವರ ಮೂತಿ ಕಪ್ಪಿಟ್ಟಿತು. ದ|| ದೇರಣ್ಣೋರಿಗೆ ಕಾಕಾ ಹೊಡೆದು ಓವರ್‌ಕೋಟ್ ಹೊದ್ದು ಪೋಲೀಸ್ ಸ್ಟೇಷನ್‌ನಲ್ಲೇ ಮುದುಡಿಕೊಳ್ಳಬೇಕೆಂದಿದ್ದ ಅವನ ಆಸೆ ನಿರಾಸೆ ಯಾಯಿತು. ದ|| ದೇರಣ್ಣೋರಿಗೆ ಈ ರಾತ್ರಿ ಯಾವುದಾದರೂ ಒಂದು ಕೇಸು ಹಿಡಿಯಲೇ ಬೇಕೆಂಬ ಹಟ. ಸೂಪ್ರೆಂಟ್ರು ಸಾಹೇಬರು ತಮ್ಮನ್ನು ನೋಡಿ ನಸುನಕ್ಕದ್ದು ಒಂದು ಕೇಸು ಹಿಡಿದರೆ ಸಬ್‌ಇನ್ಸ್‌ಪೆಕ್ಟರಾಗುವೆ ನೀನು ಎಂಬುದನ್ನು ಸೂಚಿಸುವುದೇ ಆಗಿತ್ತೆಂದು ಆತನ ನಂಬಿಕೆ. ಅದಕ್ಕೇ ಈ ಶ್ರದ್ಧೆ—ಕಾ|| ಪಕೀರಪ್ಪನವರಿಗೆ ಈ ಪಿಡುಗು.

ಅದೇ ಯೋಚನೆಯಲ್ಲಿ ಪೇಟತೆಗೆದು ಮೇಜಿಗಿಟ್ಟು ತಲೆತೆಗೆದು ಮೇಜಿಗೆ ಒರಗಿಸಿ ಕೊಂಚ ವಿಶ್ರಾಮಿಸಿಕೊಳ್ಳುವುದಕ್ಕೆ ಹಾಗೆ ಕಣ್ಣು ಮುಚ್ಚಿದ್ದಕ್ಕೂ. ಫಡಲ್ ಎಂದು ಒಂದು ಸಿಡಿಲು ಹೊಡೆಯುವುದಕ್ಕೂ ಸರಿಹೋಯಿತು. ಧಡೀರ್ ಎಂದು ದ|| ದೇರಣ್ಣೋರು ಎದ್ದು ನಿಂತರು ಕಾ|| ಫಕೀರ ಸೆಟೆದು ನಿಂತು ನಡುಗುತ್ತಿದ್ದ. ಕೋಲ್ಮಿಂಚೊಂದು ಮತ್ತೆ ಸುಳಿಯಿತು ಅದರ ಬೆಳಕಲ್ಲಿ ದ|| ದೇರಣ್ಣೋರ ಮುಖ ನೋಡಿದಾಗ ಹಣೆಯಲ್ಲಿ ಬೆವರು ಹನಿ ಮೂಡಿತ್ತು. ಅದೇ ಕಾ|| ಪಕೀರಪ್ಪನವರ ಮುಖ ನೋಡಿದಾಗ ಕಣ್ಣು ಗುಡ್ಡೆಮೇಲೆ ಸೆಕ್ಕಿ ಗಡಗಡ ನಡುಗುತ್ತಿದ್ದರು. ನಡುರಾತ್ರಿಯಲ್ಲಿ ತೂಕಡಿಸುವಾಗ ಎರಗಿದ ಸಿಡಿಲಿನ ಪರಿಣಾಮವೇ ಹೀಗೆ ಕಲ್ಲೋಲ ಅಲ್ಲೋಲ ಮಾಡುವುದು.

ಕಾ॥ ಮುನಿರಾಮು ಓಡಿ ಓಡಿ ಬಂದ. ಸೆಟೆದು ಸಲಾಂ ಹೊಡೆದ. ಬಾಯ್ಬಿಟ್ಟು "....ಚೋರಿ....ಬಂದರೆ ಈಗಲೇ ಸಿಗ್ತಾರೆ ಬಡ್ಡಿಮಕ್ಳು...." ಎಂದು ಹೇಳಿದ. ದ॥ ದೇರಣ್ಣೋರಿಗೆ ಮತ್ತೆ ಸಿಡಿಲೆರಗಿದಂತೆ ಆಯಿತು "ಫಕೀರ ಹೋಗೋ ಹಿಡಕೊಂಡು ಬಾ" ಎಂದರು. ಮುನಿರಾಮು "ಇಲ್ಲಸಾರ್ ತಾವೇ ಬಂದ್ರೆ ಒಳ್ಳೇದು-ಬಲೀ ಖದೀಮರೂಂತ ಕಾಣತ್ತೆ ..." ಎಂದು ಮತ್ತೆ ಸೆಟೆದು ಸಲಾಮುಹೊಡೆದ. ಜೇಬಿಗೆ ಕೈಬಿಟ್ಟು ಒಂದು ತುಂಡು ಪಕೋಡ ಬಾಯಿಗೆ ಎಸೆದು ಆಲೋಚನಾ ಮಗ್ನರಾಗಿ ಅತ್ತಿಂದ ಇತ್ತ ಶಥಪಥ ತಿರುಗಿದರು-ಕಡೆಗೆ ಪೇಟ ಏರಿಸಿ ಹಿಂದೆ ಕಾ॥ ಪಕೀರ ಮುಂದೆ ಕಾ॥ ಮುನಿರಾಮುರೊಡನೆ ಸವಾರಿ ಹೊರಬಿತ್ತು.

ಕತ್ತರಿಸುವಂಥ ಕತ್ತಲು-ಚಿಟಿಚಿಟಿ ಮಳೆ-ಆಗಾಗ ಕೋಲ್ಮಿಂಚು- ಮೇಲೆ ಗುಡುಗು. ಮೂವರು ಮಹಾವ್ಯಕ್ತಿಗಳು ಹೊರಬಿದ್ದರು-ಆ ಭಯಾನಕ ವಾತಾವರಣ ದಲ್ಲಿ. ಇದ್ದಕ್ಕಿದ್ದಂತೆ ಹೊರಟಿತು ಒಂದು ಶ್ವಾನವಾಣಿ-ಮುಗಿಲತ್ತ ಮೂತಿಮಾಡಿ ಮಹದೇವನಲ್ಲಿ ಮೊರೆಯಿಡುವ ಕೂಗೋ ಎಂಬಂತೆ 'ಓವ್' ಎಂಬ ದೀರ್ಘನಾದ ಈ ಕೂಗು ಆ ವಾತಾವರಣದಲ್ಲಿ ಹೃದಯಭೇದಕವಾಗಿತ್ತು. "....ಎಲ್ಲಿ...." ಎಂದರು ದ॥ ದೇರಣ್ಣೋರು. "....ಅಲ್ಲಿ ಅಣ್ಣಮ್ಮನ ಗುಡಿ ಬೀದಿಲಿ...." ಎಂದರು ಕಾ॥ ಮುನಿರಾಮುರು. ಸಬ್‌ಇನ್ಸ್ಪೆಕ್ಟರಾಗುವ ಶುಭ ಸೂಚನೆಯ ಹೊಂಗನಸು ಕಾಣುತ್ತಾ ಹೊರಟ ದಫೆದಾರ್ರಿಗೆ ಅಣ್ಣಮ್ಮನ ಗುಡಿ ಬೀದಿ ಸಮೀಪಿಸಿದಂತೆ ಆ ಕನಸು ಕೆಟ್ಟ ಕನಸಿನಂತೆ ಭಾಸವಾಯಿತು-ಕಾರಣ ಕಗ್ಗತ್ತಲು ಕಠೋರವಾತಾವರಣ. "ಅದೇ ಮನೆ...." ಎಂದು ಕಾ॥ ಮುನಿ ಅಂದ. ಆ ಮನೆಯ ಮುಂದಿನ ಕೊಠಡಿಯಲ್ಲಿ ಮಿಣು ಮಿಣುಕೆನ್ನುವ ಕಂದೀಲು ಕಾಣುತ್ತಿತ್ತು. ಈ ಮೂರುಮಂದಿ ಮೆಲ್ಲಗೆ ಆ ಮನೆ ಬಳಿ ಸೇರಿದರು. ಮುಂದಿನ ರೂಮಿಂದ ಪಿಸು ಪಿಸು ಸದ್ದು ಬರುತ್ತಿತ್ತು.... ಮೌನ.... ಇದ್ದಕ್ಕಿದ್ದಂತೆ ಆ ಕೊಠಡಿಯಿಂದ "ಚೋರೀ....ಚೋರೀ...." ಎನ್ನುವ ಕೂಗು ಕೇಳಿಬಂತು. ಆ ಕೂಗಿಗೆ ಕಂಗೆಟ್ಟು ಕಂಗಾಲಾಗಿ ಮತ್ತೆ ಸ್ಟೇಷನ್ನಿಗೆ ಓಡಿ ಹೋಗಲೇ....ಎಂದೆನಿಸಿತು. ದ॥ ದೇರಣ್ಣೋರಿಗೆ ಆ ಕ್ಷಣದಲ್ಲಿ. ಮರುಕ್ಷಣವೆ ಕಾ॥ ಫಕೀರ ಕಾ॥ ಮುನಿ ಇರುವುದು ಕಂಡು ಧೈರ್ಯತುಂಬಿಬಂತು. ಆ ಖದೀಮರನ್ನು ಹಿಡಿದು ಸಬ್॥ ಇ॥ ಆಗಲೇ ಬೇಕೆಂದೂ-ಸಾವಂತ್ರಿಗೆ ಹಾಕಿದ ಸವಾಲು ಗೆಲ್ಲಲೇ ಬೇಕೆಂದೂ ಧೈರ್ಯದಿಂದ ಆ ಕೂಗು ಹೊರಟ ಕೊಠಡಿಯ ಬಳಿಹೋಗಿ ಬಾಗಿಲಲ್ಲಿ ಇಣಿಕಿನೋಡಿದರು. ಮಿಣು ಮಿಣುಕೆನ್ನುವ ಕಂದೀಲಿನಿಂದ ಹೊರಟ ಬಂಗಾರದ ಬಣ್ಣ, ಹುಮಿ ಸಿಟ್ಟಿನಿಂದ ನಿಂತ ಆಜಾನುಭಾವನ ಮುಖದ ಮೇಲೆ ಚೆಲ್ಲಿತ್ತು. ಕಟುಕ ನಂತೆ ಕಂಡ ಅವ. ಕೆದರಿದ ಕ್ರಾಪು-ಕ್ರೂರ ದೃಷ್ಟಿ-ಕಚ್ಚಿದ ಬೀಡಿ....ದ॥ ಗೆ ಕಿಟ್ಟನೆ ಕಿರುಚುವಂತಾಯ್ತು ಅವನ ಭಂಗಿ. ಅವನು ಕೂಗಿದ ಕಠೋರವಾಣಿ ಕಾರ್ಗಲ್ಲ ಮೇಲೆ ಕುಂತು ಕೂಗಿದ ಕಾಕಾಸುರನ ಕೇಕೆಯಂತಿತ್ತು....ಅವನೇ ಆರ್ಭಟಿಸಿದ "....ಭಂಡ ಸಹವಾಸ....ಬೇವರ್ಸಿ....ಗಳಿರಾ ಗುಲಾಮು....ಗುಲಾಮಾ...."

ಸುತ್ತಲಿನ ವ್ಯಕ್ತಿಗಳು ಪಿಳಪಿಳನೆ ಕಣ್ಣುಬಿಟ್ಟು ಉಸುರೆತ್ತದೆ ಕುಳಿತಿದ್ದವು. ಮತ್ತೆ ಮೌನವನ್ನು ಸೀಳಿದ್ದು ಆ ಮನುಷ್ಯನೆ. "....ನಾಚಿಕೆಯಾಗೋಲ್ಲವೆ ನಿಮಗೆ....ಚೋರರಿರಾ....ಎರಡನೇಸಾರಿ ಈ ಕಳ್ಳತನ....ಅಚ್ಯುತರಾಯಾ....!!! ಬೊಗಳು ಯಾತಕ್ಕೆ ಬಾಯಿಮುಚ್ಚಿದೆ....ಥೂ ಭಂಡಬಾಳೆ....ಬೊಗಳು ನಿನ್ನ ಬಳಿ ಡೈಮಂಡ್ ಖರ್ಚಿ ಇರಲಿಲ್ಲವೆ?....ರಂಗು ಚೋರಿ....ನನ್ನ ಮುಂದೆ ಥೂ...." ಆ ಆಜಾನುಬಾಹು ಕೈಯ್ಯಲ್ಲಿದ್ದ ಇಸ್ಪೀಟು ಎಲೆ ಎಸೆದು ಆಳವಾಗಿ ದಂ ಎಳೆದು.... ಹೊಗೆ ಕುಡಿದ.

ಚೋರಿ ಪತ್ತೆಗೆ ಬಂದ ದ|| ದೇರಣ್ಣೋರು ಈ ರಂಗು ಚೋರಿ ಕಂಡು ಚೀರಿ ಮೂರ್ಛೆ ಹೋದರು. ಕರ್|| ಫಕೀರು ಕರ್|| ಮುನಿ—ಮುಸು ಮುಸು ನಕ್ಕರು.

|| ಹರಿಃ ಹೋಂ ಸುಸ್ತು ||

—ದಾಶರಥಿ ದೀಕ್ಷಿತ್.

---



" ಚಿಕ್ಕಂದಿನಲ್ಲಿ ನೋಡಿ ರಾಯರೇ—ಕತ್ತೆ ಬಾಲಕ್ಕೆ ಪಟಾಕಿಸರ ಕಟ್ಟಿ ಹಚ್ಚಿಬಿಡಿತಿದ್ವಿ !! "

# ತುಪ್ಪ ತನ್ನಿರೀ

"ಧರ್ಮ ಪ್ರಕಾಶಾನ್ರೀ ಅವ. ಬಲುಧಾರಾಳಿ. ಸಂಪಾದಿಸಿದ ಹಣವನ್ನೆಲ್ಲಾ ಜನರಿಗೆ ಹಂಚಬೇಕು ಅನ್ನೋದೇ ಅವನ ನಂಬಿಕೆ. ನಾನ್ಯಾರು? ನಿಮಿತ್ತಮಾತ್ರ ಭಗವಂತನ ಲೀಲೆಗೆ! ಹೀಗೇ ಅನ್ನುವವ.

ಬರ್ರೀ ಹೋಗೋಣ. ಇವತ್ತು ಅವರ ಮನೇಲಿ ಭರ್ಜರಿ ಭೋಜನ. ನಮ್ಮ ಸಾಹಿತ್ಯಮಂದಿರದ ನಾಲ್ಕಾರು ಜನರನ್ನೂ ಕರೆದಿದ್ದಾನೆ."

ಅಂತ ಅಂದರು ಶಾಮಾಚಾರ್ಯರು, ಧ! ಪ್ರ! ನನಗೂ ಚಿರಪರಿಚಿತಿ. ನಾಲ್ಕಾರುಸಾರಿ ಅವರ ಭಾಷಣಗಳನ್ನು ನಾನೇ ಬರೆದುಕೊಟ್ಟಿದ್ದೆ. ತುಂಬಾ ಒತ್ತಕ್ಷರ, ಮಹಾಪ್ರಾಣ, ಗಳಿವೆ. ಸರಿಯಾಗಿ ಬರೆದುಕೊಡ್ರಿ ಶಾಸ್ತ್ರಿಗಳೇ ಅಂತ ಆತ ಅಂಗಲಾಚಿದ್ದ. ಅಷ್ಟು ಅನ್ಯೋನ್ಯ ನಮುನಮಗೆ. ಅಂತಹವರ ಮನೆಗೆ ಉಣಲಿಕ್ಕೆ ಹೋಗುವುದರಲ್ಲಿ ತಪ್ಪೇನು? ಹೇಗೂ ಕರೆದೂ ಇದ್ದಾನೆ. ಅಂತ ಆಗಲೀ ಶಾಮಾಚಾರ್ಯರೇ! ಆದರೆ ಊಟದ ನಿಮಿತ್ತ ಏನು, ಎಂದೆ.

ದೆಹಲಿಯಿಂದ ಯಾರೋ ಹಿಂದೀ ವಿದ್ವಾಂಸರು ಬಂದಿದ್ದಾರಂತೆ. ಅವರಿಗೆ ಈ ಔತಣಕೂಟ. ಅದಕ್ಕೇ ನಮ್ಮನ್ನೂ ಕರೆದಿದ್ದಾನೆ ಅವ ಅಂತೀನಿ. ಹಿಂದೀ ಗರಡಿಯವರು ಬಂದಾಗ ನಮ್ಮೂರ ಗರಡಿ ಆಳುಗಳನ್ನು ಭೆಟ್ಟಿಮಾಡಿಸದೆ ಇದ್ದರೆ ಏನು ಚೆನ್ನ! ಅದಕ್ಕೇ ಇರಬಹುದು.

ನನಗೋ ಅನುಮಾನ, ಹೀಗೆಲ್ಲಾ ಸಾಹಿತ್ಯ ಕಲೆ ಅಂತ ಹೆಸರು ಹೇಳುವವರಿಗೆ ಬಾಯಿ ಉಪಚಾರ, ಅಭಿನಂದನಾ ಪತ್ರ, ಪತ್ರಿಕೆಗಳಲ್ಲಿ ಲೇಖನ ಬರೆಯೋದು ಇವೆಲ್ಲಾ ದೊಡ್ಡವರಾಡೋ ಆಟ. ಶ್ರೀಮಂತರು ನಡೆಸೋ ಕಾರ್ಯಕ್ರಮ. ಆದರೆ ಅವರನ್ನೆಲ್ಲಾ ಕರೆದು ಚೊಕ್ಕ ಭೋಜನಹಾಕೋದು, ಹಣ ಖರ್ಚುಮಾಡೋದು ಇವೆಲ್ಲಾ ನಾವು ಕಾಣದ ಕೇಳದ ಸಂಗತಿಗಳು. ಕೇಳಿದೆ ಆಚಾರ್ಯರನ್ನು ಹಿಂದೀ ವಿದ್ವಾಂಸರ ಹೆಸರೇನು ಅಂತ. ಅವರಂದರು ಪಂ! ಮಿತ್ರಾನಂದಜೀ ಅಂತ. ಆಗಲೇ ನನಗೆ ಹೊಳೆಯಿತು, ಅರ್ಥವೂ ಆಯಿತು—ಪಂ! ಮಿತ್ರಾನಂದಜೀಯವರ ಅಣ್ಣನೇ ಕೇಂದ್ರದಲ್ಲಿ ದುಪಟಿಸಚಿವ.—

ಅಂದಮೇಲೆ ಭೋಜನ ಚೆನ್ನಾಗಿದ್ದೇಇರಬೇಕು. ನಮ್ಮೂರಿನ ದೊಡ್ಡ ದೇವತೆಗಳು ಬಂದೇ ಬರಬೇಕು ಅಂದಮೇಲೆ ಬಿಸಿಬೇಳೆ ಕಾಂದಾಭಾತ್ ಮಾಡಿಸೇ ಮಾಡಿಸುತ್ತಾರೆ. ಏಕೆಂದರೆ ಅವರ ಮನೆಗೆ ಅಡಿಗೆಗೆ ಹೋಗುವ ನಳಾಚಾರ್ರಿಗೆ ಬಿಸಿ ಬೇಳೆ ಕಾಂದಾಭಾತೇ ಗಾಂಢೀವ. ಎರಡು ಮಿಳ್ಳೆ ತುಪ್ಪ, ಒಂದು ಬಟ್ಟಲು ನಳಾಚಾರ್ರ

ಸಾರು, ಒಂದು ದೊಡ್ಡ ಹಿಡಿ ಕಾಂದಾಭಾತ್. ಇಷ್ಟನ್ನೂ ಒಂದಕ್ಕೊಂದು ನಂಚಿ, ಸೇರಿಸಿ, ಹದಮಾಡಿಕೊಂಡು ತಿಂದರೆ, ಸ್ವರ್ಗ ಇನ್ನು ಮೂರೇ ಬೆರಳು ಅನ್ನಿಸುತ್ತೆ.

ಹೀಗೆಲ್ಲಾ ಯೋಚನೆಮಾಡಿ, ನಾನೂ ಶಾಮಾಚಾರ್ರೂ ಧ| ಪ್ರ| ಮನೆಗೆ ಸಂಜೆ ಏಳು ಗಂಟೆಗೆ ಊಟಕ್ಕೆ ಹಾಜರಾದೆವು.

ಹೆಚ್ಚು ಜನ ಬಂದಿರಲಿಲ್ಲ. ಸುಮಾರು ನಲವತ್ತು ಜನರಿರಬಹುದು. ಆದರೆ ನಮ್ಮ ಸಾಹಿತ್ಯ ಮಂದಿರದ ಮೂರು ಜನರನ್ನ ಬಿಟ್ಟರೆ, ಮಿಕ್ಕ ಮೂವತ್ತೇಳು ಜನರೂ ಹೊಟ್ಟೆ ತುಂಬಿದವರು, ಜಂಭಕ್ಕೆ ಊಟ ಮಾಡುವವರೇ ವಿನಹಾ ಹಸಿವೆದ್ದು ಊಟಮಾಡಿದವರಿಲ್ಲ. ಅಂದಮೇಲೆ ಬಡಿಸುವುದೂ ವಿತರಣೆಯಾಗಿರುತ್ತೆ ಅಂದು ಕೊಂಡೆವು.

ಊಟ ಶುರುವಾಯಿತು. ಧ| ಪ್ರ| ರು ಖುದ್ದಾಗಿ ತಾವೇ ಓಡಾಡುತ್ತಿದ್ದರು. ಅವರ ಸಹಾಯಕ್ಕೆ ಖಾದಿತೊಟ್ಟ ಅವರ ಸೋದರಳಿಯಂದಿರು ಇಬ್ಬರು, ಸಿಲ್ಕ್ ಜುಬ್ಬಾ ಧರಿಸಿ ಮೆರೆವ ಗಂಡು ಮಕ್ಕಳಿಬ್ಬರು–

ಕಾಂದಾಭಾತ್ ಬಡಿಸಿದರು. ತುಪ್ಪಕ್ಕೆ ಕಾದೆವು, ಬರಲೇಇಲ್ಲ. ಧ| ಪ್ರ| ಬಂದು ಕೇಳಿದರು. ಎಲ್ಲಾ ಸರಿಯಾಗಿದೆಯೇ ಅಂತ. ನನ್ನ ಜತೆಯವರು ಸುಮ್ಮಗಿದ್ದರು. ನಾನು ಕಾಂದಾಭಾತನ್ನು ಮುಟ್ಟನೋಡಿದೆ. ಆಗಲೇ ಆರಿ ಹೋಗು ತ್ತಿತ್ತು ಆಲಸ್ಯಮಾಡಿದರೆ ಇನೂ ತುಪ್ಪವಿಲ್ಲದೆ ವಿಷವಾಗುತ್ತದೆ ಎಂದುತೋರಿತು. ಧೈರ್ಯಮಾಡಿ ಹೇಳಿಯೇಬಿಟ್ಟೆ. "ಎಲ್ಲಾ ಸರಿ! ರಾಯರೆ ಆದರೆ ತುಪ್ಪಬರಲಿಲ್ಲ" ಅಂತ. ಧ| ಪ್ರ| ರು ಅಲ್ಲಿಂದಲೇ ಒಂದು ಬೊಬ್ಬೆಹಾಕಿದರು "ಎಲ್ಲ್ರೀ! ಇಲ್ಲಿ ತುಪ್ಪ ತಂದು ಬಡಿಸಿರಿ" ಅಂತ. ಆ ಕೂಗು ಆ ಪಂಜ್ಕ್ತಿಯಕೊನೆಗೆ ಹೋಗುವ ಹೊತ್ತಿಗೆ ಅಲ್ಲಿದ್ದ ಖಾದಿ ಸೋದರಳಿಯು, "ತುಪ್ಪ ಬರಲಿ" ಎಂದು ಮಾರ್ದನಿಕೊಟ್ಟ. ಆ ಮಾರ್ದನಿ ಇನ್ನೊಂದು ಪಂಜ್ಕ್ತಿಗೆ ಹೋಗುವ ಹೊತ್ತಿಗೆ ಸಿಲ್ಕ್‌ಮಗ ಅದಕ್ಕೆ "ತುಪ್ಪ ತನ್ನಿ" ಅಂತ ಕುಮ್ಮಕ್ಕುಕೊಟ್ಟ. ಆರು ಬಾರಿ ಆ ಊಟದ ಕೊಠಡಿಯಲ್ಲಿ ಈ "ತುಪ್ಪದ ಕೂಗು" ಅಡ್ಡಾಡಿತು. ಆದರೆ ಊಟದ ಕೊಠಡಿಬಿಟ್ಟು ಅಡಿಗೆ ಮನೆಯ ಕಡೆ ಹೋದ ಹಾಗೆ ಕಾಣಲಿಲ್ಲ.

ಅನ್ನ ಸಾರು ಬಂತು.—ಕಾಂದಾಭಾತನ್ನು ಪಕ್ಕಕ್ಕೆ ಸರಿಸಿ ಅದನ್ನು ಬಡಿಸಿ ಕೊಂಡೆ.—ತಿರುಗಿ ತುಪ್ಪಕ್ಕೆ ಕಾದೆ. ತುಪ್ಪದ ಕೂಗು ಕೇಳಿಸಿತೇ ವಿನಹಾ ತುಪ್ಪದ ವಾಸನೆಕೂಡ ಬರಲಿಲ್ಲ.

ಆಂಬೊಡೆ ಬಂದಾಗ, ಅನ್ನ ಸಾರು ಬದಿಗಿಟ್ಟೆ. ಒಂದು ಚೂರು ಆಂಬೊಡೆ ತಿಂದೆ. ಬಲು ಖಾರವಾಗಿತ್ತೋ! ಅಥವಾ ನನ್ನ ನಾಲಿಗೆಯೇ ಖರಾಬಾಗಿತ್ತೋ!–ದೇವರೇ ಬಲ್ಲ. ಆದರೆ ಕಣ್ಣಲ್ಲಿ ನೀರಿಳಿಯಿತು.

ಇಷ್ಟು ಹೊತ್ತಿಗೆ ಐದು ಜನ ಮನೆಯವರೂ ಬಂದು ವಿಚಾರಿಸಿದ್ದೂ ವಿಚಾರಿಸಿದ್ದೇ! "ಏನು ಬೇಕು"! "ಸಾವಧಾನವಾಗಿ ಆಗಲಿ" ಅಂತ.

ಜಿಲೇಬಿ ತಂದರು. ನೋಡುಕ್ಕೆ ಬಲು ಚೆನ್ನಾಗಿತ್ತು. ಆದರೆ ನನ್ನ ಎಲೆಯ ಹತ್ತಿರ ಬರುವಾಗ ತಟ್ಟೆ ಖಾಲಿಯಾಯಿತು. ಹೊಸ ತಟ್ಟೆ ತಂದವರು, ನನ್ನ ಮುಂದಿನ ಎಲೆಯಿಂದ ಪ್ರಾರಂಭ ಮಾಡಿದರು. ಹೇಗೆ ಕೇಳೋದು ಅಂತ ಮೇಷ ವಿಾನ ನೋಡುವಾಗಲೇ ವೃಷಭಗಳ ಹಾಗೆ ನಳವಲಲರು ಮುಂದೆ ನುಗ್ಗಿ ಹೊರಟುಹೋಗಿದ್ದರು. ಈ ದುರಂತ ಪ್ರಕರಣದಿಂದ ತಳಮಳಿಸಿದ ಮನಸ್ಸನ್ನು ಹತೋಟಿಗೆ ತರುವ ಹೊತ್ತಿಗೆ ಅನ್ನ ಮಜ್ಜಿಗೆ ಬಂತು.

ಧ| ಪ್ರ| ರು ಬಂದರು. ಖಾದಿ ಸೋದರಳಿಯಂದರು ಬಂದರು ಸಿಲ್ಕ್‌ಮಕ್ಕಳೂ ಬಂದರು. ಒಬ್ಬಬ್ಬರೂ ಒಂದೊಂದು ತುಪ್ಪದಪಾತ್ರೆ ಹಿಡಿದು ಬಂದಿದ್ದರು ಎಲ್ಲರೂ ನನ್ನ ಎಲೆ ಎದುರಿಗೆ ಸಾಲಾಗಿ ನಿಂತರು ತುಪ್ಪ ಬೇಕೇ ಎಂದು ಪಲ್ಲವಿ ಹಾಡಿದರು. ತುಪ್ಪ ಬೇಕೇ ಅಂತ ಅನುಪಲ್ಲವಿ ಹಾಡಿದರು.

ಮಜ್ಜಿಗೆ ಅನ್ನಕ್ಕೆ ತುಪ್ಪ ತುಂಬಿಸಲು ಬಂದಿದ್ದರು. ನನಗೆ ರೇಗಿಹೋಗಿತ್ತು —ಹಸಿದ ಹಾರವ. ಹಸಿದ ಸಾಹಿತಿ. ತುಂಬಿದ ಹೊಟ್ಟೆಗಳ್ನೂ ನೋಡಿ ಹಸಿವು ಹೆಚ್ಚಾದ ಸುಸ್ತುಪ್ರಾಣಿ, ಎಲ್ಲರಿಗೂ ಕೇಳಿಸುವ ಹಾಗೆ ಅಂದೇ ಬಿಟ್ಟೆ.

"ಏನ್ರೀ! ಇದು. ಮೊದಲಿಂದ ಕೊನೆ ತನಕ ತುಪ್ಪ ಕೇಳಿದರೂ ತುಪ್ಪ ಬರಲಿಲ್ಲ. ಮಜ್ಜಿಗೆ ಅನ್ನದ ವೇಳೆಗೆ ತುಪ್ಪ ತಂದಿದ್ದೀರಿ! ಅಲ್ಲಿಂದಲೇ ಧಾರಾಪುರದ ವಾಸನೆ. ಇಷ್ಟೆಲ್ಲಾ ಮಾಡಿಸಿದೋರು ಒಳ್ಳೇ ತುಪ್ಪ ಮೊದಲೇ ಬಡಿಸಬಾರದೇ!"

ಇದೇನು! ಸುಬ್ರಹ್ಮಣ್ಯದ ಪಾರುಪತ್ತ್ಯೇಗಾರರಂತೆ ಮನೆಯಲ್ಲೇ ಮಾಡಿದರಲ್ಲಾ! ಎಂದು.

ಮಿಕ್ಕಿದ್ದೆಲ್ಲಾ ಸಣ್ಣ ವಿಷಯ ಅನ್ನಿ. ಅಡಿಗೆಯವನು ನನ್ನ ಹರಿಕತೆ ಕೇಳಿದ್ದನಂತೆ. ಹೊರಟಾಗ ಅವ ಅಡ್ಡರಸ್ತೇಲಿ ಒಂದು ತುಂಬಿದ ಪೊಟ್ಟಣ ಕೊಟ್ಟು, ಶಾಸ್ತ್ರೀಗಳೇ! ನಿಮ್ಮ ಊಟ ನೋಡಿದೆ. ಮನೆಗೆ ಹೋಗಿ ಇದನ್ನು ತಿನ್ನಿ. ತುಪ್ಪ ಹಾಕಿ ಕಲಿಸಿದ್ದೇನೆ ಅಂದ.

ದೇವರು ಯಾವ ಅಡ್ಡ ರಸ್ತೆಯಲ್ಲಿ ಯಾವ ರೂಪಿನಲ್ಲಿ ಪ್ರತ್ಯಕ್ಷವಾಗ್ತಾನೋ ಎಂದ ವೇದಾಂತಿಗಳಿಗೆ ಇದೇ ನನ್ನ ಉತ್ತರ.

—ಶಾಸ್ತ್ರಿ.

—— o ——

# ಕೊರವಾವಲೋಕನ

---

ಸುಬ್ಬರಾಯನ ಪ್ರಸ್ಥಿ. ಲಕ್ಷಣವಾಗಿ ಊಟವಮಾಡಿ, ವಟುವಿಗೆ ಒಂದು ಪಂಚೆಕೊಟ್ಟು, ಮಧ್ಯಾಹ್ನ ಸುಖವಾಗಿ ನಿದ್ರೆಮಾಡಿ, ಸಾಯಂಕಾಲ ಕ್ಲಬ್ಬಿಗೆ ಹೋದೆ; ಕೊರವ ವರಾಂಡದಲ್ಲೇ ಕುಳಿತಿದ್ದ. 'ಏನಯ್ಯಾ! ಸಮಾಚಾರ' ಅಂತ ಲೌಕೀಕ ವಾಗಿ ಅವನ ಬೆನ್ನಮೇಲೆ ಒಂದು ತಟ್ಟಿ, ಕೇಳಿದೆ.

ಅವನ ಮನಸ್ಸಿನ ಯಾವ ಹುತ್ತದಲ್ಲಿ ಅವನು ಅಡಗಿದ್ದನೋ, ಸುಬ್ರಹ್ಮಣ್ಯನೇ ಬಲ್ಲ. ನಾನು ಬೆನ್ನಮೇಲೆ ತಟ್ಟಿದ್ದು ಅವನ ಮನಸ್ಸನ್ನೂ ಆಹುತ್ತದಿಂದ ಹೊಡೆ ದೆಬ್ಬಿಸಿತು, ಅಂತ ಕಾಣುತ್ತೆ. ಬುಸು ಬುಸುಗುಟ್ಟಿ ಎಚ್ಚೆತ್ತ. ತಲೆಯಮೇಲಿದ್ದ ಕ್ರಾಪು ಹೆಡೆಯಂತೆ ಹರಡಿಕೊಂಡಿತು. ಬಾಯಿ ಬಿಚ್ಚಿದ. ಹರಿತವಾದ ನಾಲಗೆ, ವಿಷದಂತಗಳು ಕಂಡವು. ಎರಡುಬಾರಿ ಲೊಚಗುಟ್ಟಿದ. ಅವನ ಮುಖವನ್ನೇ ನಾನು ಎವೆಯಿಕ್ಕದೆ ನೋಡುತ್ತಿದ್ದೆ. ಕಾಳಿಂಗಸರ್ಪನ ಮುಂದೆ ಕೇರೆ ಹಾವು ಕಣ್ಣು ಅಲುಗಿಸದೆ ಜಾದು ಹಿಡಿದಂತೆ ನೋಡುವ ಹಾಗೆ, ಬಕಳಿಸಲ್ಪಡುವ ಮುನ್ನ. ಒಂದು ಬಾರಿ ಮೈ ಅದರಿಸಿದ. ಬಟ್ಟೆಯಮೇಲೆಲ್ಲಾ ಕುಳಿತಿದ್ದ ಒಂದು ತೆಳುವಾದ ಬೂದಿಯ ಪರೆ ಹೊರಗೆ ಬಿತ್ತು. ಕಾಯಕಲ್ಪ ಗೊಂಡವನಂತೆ, ಮೈ ಮುರಿದು, ಕೇಳಿದ "ಅಲ್ಲಾ ಕಾಣೋ! ಸಾಕ್ಷಾತ್ ವಾಸುಕೀನೇ ಕೆಣಕೋದಕ್ಕೆ ಹೊರಟ ಎಳನಾಗರಿನಂತೆ ನೀನು, ಸರಕಾರಿನೌಕರ, ಮಾರ್ವಾಡಿ ಹತ್ತಿರ ಅರ್ಧ ನೌಕರ. ಮನೆಯಾಕೆಗೆ ಮಿಕ್ಕರ್ಧ ನೌಕರ, ಮಿಾಸೆ ಹೊರಲಾರದೆ "ಮೇಲ್ಕುಟೇನ ತಿರುಪತೀಗೆ ಕಳಿಸಿದವ, ನಿನಗೆ ಅದೆಷ್ಟು ಧೈರ್ಯ ಬಂತೋ, "ನಾನು ಯಾವುದೋ ಗಹನವಾದ ವಿಷಯವನ್ನು ಆಳವಾಗಿ ಯೋಚಿಸುತ್ತಿದ್ದರೆ. ತೀವ್ರವಾಗಿ ಬೆನ್ನುತಟ್ಟಿ, ಚುರುಕಾಗಿ ಎಬ್ಬಿಸಿದೆ ಯಲ್ಲೋ! ಎಂದು.

ಮೇಜಿನ ಕೆಳಗೆ ಸರ ಸರ ಶಬ್ದ ಆಯಿತು. ಯಾವುದಾದರೂ ಹಾವೇ ನಾದರೂ ಬಂತೋ ಅಂತ ಮೇಜಿನ ಕೆಳಕ್ಕೆ ದೃಷ್ಟಿ ಹರಿಸಿದೆ. ಕೊರವ ಚಪ್ಪಲೀನ ಸಡಿಲ ಮಾಡಿಕೊಳ್ಳುತ್ತಿದ್ದ.

ನನಗೆ ಹೆದರಿಕೆ. ಕೊರವ ಏನು ಮಾಡಲಿಕ್ಕೂ ಹೇಸದವ. ಒಮ್ಮೆ ಯಾರೋ ದಂಡೆ ಹೂಮಾಲೆ ಅವನಿಗೆ ಹಾಕಿದ್ದರು. ಮಾತಿಗೆ ಮಾತು ಬೆಳೆದು ಆ ದಂಡೇ

ಹೂವಿನ ಹಾರದಲ್ಲೇ, ಹಾಕಿದವನ ಕೆನ್ನೆಗೆ ಎರಡು ಬೀರಿದ. ನೀವು ನಂಬಿದರೂ ನಂಬಿ, ಬಿಟ್ಟರೂ ಬಿಡಿ. ದವಡೆ ಹಲ್ಲು ಎರಡು ಸಡಿಲವಾಯಿತು. ಇನ್ನೊಮ್ಮೆ ಕೊರವ ಬರೆಯುತ್ತಿದ್ದಾಗ ಅವನನ್ನು ಗೇಲಿಮಾಡಿದರು. ಕೈಲಿದ್ದ ಫೌಂಟನ್ ಪೆನ್ನಿನಿಂದ ಗೇಲಿಮಾಡಲೆತ್ನಿಸಿದವನ ಹೊಟ್ಟೆ ಚುಚ್ಚಿದ. ಅವ ಮೂರು ದಿವಸ ಹೊಟ್ಟೇನೋವು ಅಂತ ಆಸ್ಪತ್ರೆಯಲ್ಲಿದ್ದ. ಕಡೆಗೆ ಎಕ್ಸ್‌ರೆ ತೆಗೆದಮೇಲೆ ಆ ಕತ್ತಲೆ ಕೋಣೆ ಭಯದಿಂದ ಹೊಟ್ಟೆನೋವು ಇಲ್ಲ ಅಂತಂದು ಮನೆಗೆ ಬಂದ.

ಇಂತಹ ಪ್ರಭೃತಿ ಈಗ ಚಪ್ಪಲಿ ಸಡಿಲಿಸೋದು ನೋಡಿ ನನಗೇನೋ ಗಾಭರಿಯಾಯ್ತು. ಕ್ಲಬ್ಬಿನಲ್ಲಿ ಚಪ್ಪಲಿ ಏಟು ಹಾಕೋನೇ ಇವನು ಎಂದು ನೀವು ಕೇಳಬೇಡಿ. ಕ್ಲಬ್ಬಿನಲ್ಲಿ ಹಾಗಿರಲಿ, ಗರ್ಭ ಗುಡಿಯಲ್ಲಿ ಕೂಡ ಅವ ರೇಗಿದರೆ, ಚಪ್ಪಲೀಲೇ ಬಾರಿಸಲು ಏನೂ ಹಿಂತೆಗೆಯುವವನಲ್ಲ.

ಬೇಗ ಎದ್ದು ನಿಂತೆ. ಅವನ ಕೈಮೇಲೆ ಕಣ್ಣು. ಏನಾದರೂ ಸೂಚನಾರ್ಥವಾಗಿ ಕೈ ಕಾಲಿನ ತನಕ ಹೋಗುವ ಹಾಗಾದರೆ ತಕ್ಷಣ ಓಡಿಬಿಡಬೇಕು ಎಂದು ಅಣಿಮಾಡಿಕೊಂಡೆ. ಒನ್, ಟು, ತ್ರೀ ಅಷ್ಟು ಸಿದ್ಧವಾದೆ, ಆಫ್ ಅನ್ನೋದೊಂದೇ ಬಾಕಿ.

ನನ್ನ ಸಿದ್ಧತೆ ಕೊರವ ಕಂಡ. ಅವನಿಗೆ ನಾನು ಹೆದರಿದ್ದೇನೆ ಎಂದು ಅರಿತು ಪ್ರಸನ್ನನಾದ. ಕದನ ಕುತೂಹಲ ಅವನ ಮುಖದಿಂದ ಮಾಯವಾಯಿತು.

"ಕೂತುಕೋ! ಮಗು! ಯಾಕೆ ಹೀಗೆ ತರಾತುರಿ ಪಡುತ್ತಿದ್ದಿ? ಪ್ರಷ್ಮಿ. ಸುಬ್ರಹ್ಮಣ್ಯೇಶ್ವರನ ಧಾನ ಮಾಡುತ್ತಿದೆ. ಶ್ರೀಮನ್ಮಹಾವಿಷ್ಣುವಿನ ಹಾಸಿಗೆಯಾದ ವಾಸುಕಿಯೇ ಇಂದು ಆರಾಧ್ಯ ದೇವತೆ. ನಮ್ಮ ಹಿಂದೂಗಳ ಮನೋವೈಶಾಲ್ಯಕ್ಕೆ ಮನಸ್ಸಿನಲ್ಲಿಯೇ ತಲೆದೂಗುತ್ತಿದೆ. ಯಾವ ಹಿರಿಯ ಗುಣ ಎಲ್ಲೇ ಇರಲಿ. ಅದನ್ನೇ ಆರಾಧ್ಯ ದೇವತೆಯಾಗಿಮಾಡಿ, ಮಡಿಯಿಂದ ಪೂಜಿಸುತ್ತಿದ್ದರು. ನಮ್ಮ ಮನಸ್ಸಿನಂತೆಯೇ ದೇವರನ್ನೂ ನಿರ್ಮಿಸಿಗೊಳ್ಳುತ್ತಿದ್ದರು. ಆ ಯೋಚನಾ ಸರಣಿಯಲ್ಲಿದ್ದಾಗ ನೀನು ಎಚ್ಚರಿಸಿದೆ. ಎರಡು ನಿಮಿಷ ಮನಸ್ಸು ರೇಗಿತು. ಅಷ್ಟೆ." ಅಂದ.

"ಹೌದು ಕೊರವ! ನನಗೂ ಆ ಎರಡು ನಿಮಿಷ ನೀನೂ ಕೂಡ, ಸಾಕ್ಷಾತ್ ಸರ್ಪರಾಜನಂತೆಯೇ ಕಂಡೆ. ನಿನ್ನ ನಾಲಿಗೆ ಹರಿತವೋ ನಿನ್ನ ವಿಷದಂತ ತೀಕ್ಷ್ಣವೋ, ಅಲ್ಲಾ ನಿನ್ನ ಅಡಿಯ ಚಪ್ಪಲಿ ಬಿರುಸೋ ಎಂದು ಅನುಮಾನ ಬಂತು ನನಗೆ" ಅಂದೆ. ಹಣೆಯಿಂದ ಬೆವರೊರಸಿಕೊಳ್ಳುತ್ತಾ.

ಅಷ್ಟು ಬೆಚ್ಚಿದೆಯಾ ಮಗೂ! ಅಂತ, ಕೊರವ ಕಾಫಿ ತರಿಸಿಕೊಟ್ಟ.

* * *

ಕೈಯೆಣ್ಣೆ ಕುಡಿದಕೂಡಲೆ ಕ್ವಿನೀನ್‌ಗುಳಿಗೆ ಬಾಯಿಗೆ ಹಾಕಿದರು ಅನ್ನಿ. ಹಿಂದಿನ ದಿನವೆಲ್ಲಾ ಜ್ವರಾ ಬಂದಿತ್ತು ಅನ್ನಿ. ನಾಲಿಗೆಯೆಲ್ಲಾ ಕಾರ್ಕೋಟ ವಿಷ ವಾಗಿತ್ತು ಅನ್ನಿ. ಆಗ ಮುಖ ಯಾವ ರೀತಿ ಇರುತ್ತೆ ಹಾಗಿತ್ತು ಕೊರವನ ಮುಖ, ಮಂಗಳವಾರ ಸಂಜೆ.

ಸೋಮವಾರ ವಾರ್ಷಿಕ ಸಭೆ. ಕೊರವ ಸರ್ವಾನುಮತದಿಂದ ಮರಿ ಅಧ್ಯಕ್ಷ ನಾಗಿ ಆಯ್ಕೆಯಾಗಿದ್ದ, ಎಂದು ಮಂಗಳವಾರ ಸಂಜೆ, ಕ್ಲಬ್ಬಿಗೆ ಹೋದಾಗಲೇ ಹೇಳಿದ್ದರು. ಅವನನ್ನು ಅಭಿನಂದಿಸೋಣ ಅಂತ ಹೋದರೆ ಬೇವಿನಕಾಯಿ ತಿಂದ ಈ ಕರೀ ಕೊರಂಗು ಮುಖವಾಡ.

ಯಾಕೋ ಎಂದು ಅಭಿನಂದಿಸುವ ಮುನ್ನ ಪ್ರಶ್ನಿಸಿದೆ, ಹುಬ್ಬಿನಿಂದ. ನೋಟೀಸ್ ಬೋರ್ಡ್ ಕಡೆ ದೃಷ್ಟಿ ಹೊರಳಿಸಿದ.

ಅಲ್ಲಿಗೆ ಹೋಗಿ ಓದಿದೆ. ಕೊರವ ಮರಿಅಧ್ಯಕ್ಷನಾದನೆಂದು ಹಿರಿಯ ಅಕ್ಷರ ಗಳಲ್ಲಿ ಅಲ್ಲಿ ಪ್ರಚುರವಾಗಿತ್ತು.

“ನಿನ್ನ ಸ್ನೇಹಿತರಿಗೆ ನಿನ್ನಲ್ಲಿ ಎಷ್ಟು ವಿಶ್ವಾಸ, ನೀನೆ ಧನ್ಯ” ಅಂದೆ.

“ನಾನೊಬ್ಬನೇ ಅಲ್ಲ. ನಾವಿಬ್ಬರೂ ಧನ್ಯರು” ಅಂದ.

“ನಾವಿಬ್ಬರೂ ಅಂದರೆ ನಾನೂ ನೀನು ಅಂತಲೇ” ಅಂದೆ.

“ಅಲ್ಲಾ! ಅಲ್ಲಾ! ನಾನೂ ಆ ಯುವರಾಜ ಕರಣಸಿಂಗ್, ಅವರೂ, ನಾವಿಬ್ಬರೂ ಧನ್ಯರು.”

“ತಿರುಗಿ ಒಂದೇ ಹುಬ್ಬು ಎತ್ತಿದೆ. ಅರ್ಥವಾಗಲಿಲ್ಲ ಅಂತ ಹೇಳುಕ್ಕೆ.

“ನೋಡೋ! ನಾವಿಬ್ಬರೂ ಆಯ್ಕೆಯಾಗಿ ಅಧ್ಯಕ್ಷಪದವಿಗೆ ಬಂದವರು. ಈ ಕ್ಲಬ್ಬು ಒಂದು ಮರಿ ರಾಜ್ಯ, ಅದಕ್ಕೆ ನಾನು ಮರಿ ಅಧ್ಯಕ್ಷ. ದೊಡ್ಡ ರಾಜ್ಯ ಕಾಶ್ಮೀರ; ಅದಕ್ಕೆ ಅವ ಅಧ್ಯಕ್ಷ.

ಅವನ ಹಾಗೇ ನಾನೂ ಜನಾನುರಾಗಿ; ನನ್ನ ಹಾಗೇ ಅವನೂ ಜನರ ವಿಶ್ವಾಸ ಗಳಿಸಿದ್ದಾನೆ. ಇಬ್ಬರೂ ಒಂದೇ ತರಹ–ರಾಜ್ಯವಿಲ್ಲದ ರಾಜರು, ಅಧಿಕಾರವಿಲ್ಲದ ಅಧಿಕಾರಿಗಳು–ಕಾರ್ಯವಿಲ್ಲದ ಕಾರ್ಯದರ್ಶಿಗಳು. ಹಲ್ಲುತೆಗೆದ ಹಾವುಗಳು– ನಮ್ಮಿಬ್ಬರನ್ನೂ ಅಭಿನಂದಿಸಿದರೆ ನಮ್ಮಪಾಡಿನ ನೆನಪು ಬಂದು ದುಃಖವೇ

ಆಗುತ್ತೆ ಅಂತ" ಇನ್ನೇನು ಅತ್ತೇಬಿಡುತ್ತಾನೋ ಈ ಗಡವ ಅನ್ನುವ ಹಾಗೆ ಮುಖ ಮಾಡಿದ.

*   *   *

ಅವನ ಕಣ್ಣೆಲ್ಲಾ ಕೆಂಪಗಿತ್ತು. ಮುಖ ಧುಮುಧುಮು ಗುಟ್ಟುತ್ತಿತ್ತು. ಆ ಸಂಜೆ ಐದು ಗಂಟೆಗೆ ಕ್ಲಬ್ಬಿನಲ್ಲಿ ಕೊರವನ್ನ ನೋಡಿದಾಗ. ಆಗ ತಾನೆ ಕಚೇರಿಯಿಂದ ಹೋಗಿದ್ದೆ. ಒಂದು ಕಪ್ ಕಾಫಿಕುಡಿದು, ನಂತರ ವಾಕಿಂಗ್ ಹೋಗೋಣ ಅಂತ. ರೀಡಿಂಗ್ ರೂಮಿನಲ್ಲೇ ಕೊರವ ಕೂತಿದ್ದ, ನಾನು ನೋಡಿದಾಗ.

"ಯಾಕಯ್ಯಾ! ಕೊರವ ಮೈ ಚೆನ್ನಾಗಿಲ್ಲವೇ?" ಎಂದೆ.

'ನಿನ್ನೆ ಕಡಲೆಕಾಯಿ ಪರಸೆ ಅಂತ ಹುಡುಗರು ಕಡಲೆಕಾಯಿಕೊಟ್ಟರು ರುಚಿ ಯಾಗೇ ಇತ್ತು. ಸ್ವಲ್ಪ ಮಟ್ಟಿಗೆ ತ್ರಾಸಾಗುವನಕ ತಿಂದೆ. ಬಾಯಾರಿತು ತಣ್ಣೀರು ಕುಡಿದೆ. ಬೆಳಿಗ್ಗೆ ಎದ್ದಾಗ ಸ್ವಲ್ಪವಾಕರಿಕೆ ತರಹ ಇತ್ತು. ಗಂಡಸಾಗಿ ಹುಟ್ಟಿದರೂ ಇದು ತಪ್ಪಲಿಲ್ಲವಲ್ಲಾ ಅಂತ ಅಂದುಕೊಂಡೆ. ಮಧ್ಯಾಹ್ನ ಸ್ವಲ್ಪಹೊತ್ತು ಮಲಗಿದೆ. ಕೆಟ್ಟ ಕೆಟ್ಟ ಕನಸುಬಿತ್ತು. ಎದ್ದವನೇ ಮುಖ ತೊಳೆದುಕೊಂಡು ಕ್ಲಬ್ಬಿಗೆ ಬಂದೆ. ಮನೆಗಿಂತ ಈ ಕ್ಲಬ್ಬೇವಾಶಿ ಸುಧಾರಿಸಿಕೊಳ್ಳುಕ್ಕೆ ಅಂತ. ಈಗ ಸ್ವಲ್ಪ ಮೈ ಬೆವ ರುತ್ತಾ ಇದೆ. ಹಗೂರಾಗಿದೆ ಅಂದ.

'ಅಂತಹುದೇನಯ್ಯಾ ಕೆಟ್ಟ ಕನಸು. ಜ್ಞಾಪಕ ಇದೆಯೇ!' ಅಂದೆ.

'ಅಂತಹ ಕೆಟ್ಟದೇನೂ ಅಲ್ಲ ಆದರೆ ಹುಚ್ಚುಕನಸು. ಜ್ಞಾಪಕ ಚೆನ್ನಾಗಿದೆ ಕನಸಿನಲ್ಲಿ ಪ್ರಧಾನಸಚಿವರು, ಪವರ್‌ಹೌಸ್ ಉದ್ಘಾಟನೆಮಾಡಿದರು. ಇನ್ನೊಬ್ಬ ಸಚಿವರು, ಸಕ್ಕರೆ ಕಂಪನಿ ಶಾಲೆಯ ಉದ್ಘಾಟನೆ ಮಾಡಿದರು. ಮಗುದೊಬ್ಬರು ಸಂಗೀತ ಸಪ್ತಾಹದ ಶುರು ಹಚ್ಚಿದರು ಇನ್ನೊಬ್ಬರು ಹೊಸ ಬಳೆ ಅಂಗಡಿಯ ಟೇಪ್ ಹರಿದರು. ಕಡೆಗೆ ಏನಾಯ್ತುಗೊತ್ತೆ ಕನಸಿನಲ್ಲಿ:—ಒಬ್ಬ ಹಿರಿಯರು ನೂತನ ಬಡಾವಣೆಯ ಗುದ್ದಲಿ ಪೂಜೆಯೋ ಏನೋ ಮಸಕುಮಸಕಾಗಿ ಜ್ಞಾಪಕ. ಅಥವಾ ಮನೆ ಬಡಾವಣೆಯ ಪ್ರಥಮಪ್ರವೇಶವೋ ಹೇಳಲಾರೆ. ಆದರೆ ಒಂದು ಸರಪಣಿ ಹಿಡಿದು ಎಳೆಯುತ್ತಾ ಇದ್ದರು. ನೀರು ಹರಿದ ಶಬ್ದ ಕೇಳಿಸುತ್ತಿತ್ತು. ಆ ಚಿತ್ರ ಮಾತ್ರ ಕಣ್ಣಿಗೆ ಕಟ್ಟಿದ ಹಾಗಿದೆ ಅಂದ.

ಶ್ರೀ ಶಾಸ್ತ್ರಿಗಳು ಇದನ್ನು ನನಗೆ ಹೇಳಿದ ಜ್ಞಾಪಕ. ಕೊರವ ತಾನು ಕನಸು ಕಂಡೆ ಅಂತಾನಲ್ಲ! ಕೊರಮ, ಕಳ್ಳ ಕೊರಮ ಇವ ಎಂದುಕೊಂಡೆ.

—o—

# "ನಮ್ಮ ಶಾಮೂ ತಾನೇ"

---

ಆರು ವರ್ಷ ಒಟ್ಟಿಗೆ ಓದಿದವರು, ।ಹತ್ತು ವರ್ಷ ಅಕ್ಕ ಪಕ್ಕದ ಮನೆಯಲ್ಲಿ ಸಂಸಾರ ಮಾಡಿದವರು. ಇಪ್ಪತ್ತೈದು ವರ್ಷ ಸಾಯಂಕಾಲ, ವಿರಾಮ, ವಿಹಾರ ಅಂದರೆ ಒಬ್ಬರ ಜತೆಗೆ ಒಬ್ಬರು ಹೋಗುತ್ತಿದ್ದವರು, ಒಬ್ಬರು ಓದಿದ್ದನ್ನೇ ಇನ್ನೊಬ್ಬರು ಮೆಚ್ಚುತ್ತಿದ್ದವರು, ಇಷ್ಟು ಅನ್ಯೋನ್ಯವಾಗಿದ್ದರು. ಶಾಮು ಮತ್ತು ಕಿಟ್ಟು— ಈಗತಾನೆ ಒಬ್ಬರು ಮಲ್ಲೇಶ್ವರ ಒಬ್ಬರು ಬಸವನಗುಡಿ.

ಕಿಟ್ಟು ಮಗಳ ಮದುವೆ ಗೊತ್ತಾಯಿತು. ಗಂಡಿಗೆ ರಜಾಸಿಗುವ ದಿನಗಳು ನಿಷ್ಕರ್ಷೆಯಾಯಿತು. ಮಾರ್ವಾಡಿ, ಪಠಾಣ, ಇಬ್ಬರೂ ಹಣದ ಬೆಂಬಲ ಕೊಟ್ಟರು. ಅಂದಮೇಲೆ ಉಳಿದ ದೊಡ್ಡ ಕಾರ್ಯವೆಂದರೆ ಲಗ್ನಪತ್ರಿಕೆಗಳನ್ನು ತಿಳಿದವರಿಗೆ, ನೆಂಟರಿಷ್ಟರಿಗೆ, ಒಬ್ಬರನ್ನೂ ಮರೆಯದೆ ಸರಿಯಾದ ವಿಳಾಸ ಬರೆದು ಕಳಿಸುವುದು.

ಕಿಟ್ಟು ರಾತ್ರಿ ಊಟ ಮಾಡಿ, ಹೆಂಡತಿ ಮಕ್ಕಳೊಡನೆ ದಿನಾಲೂ ನಾಲ್ಕು ಗಂಟೆ ಕೂತು ಜ್ಞಾಪಿಸಿಕೊಂಡು ಪಟ್ಟಿ ತಯಾರ್ಮಾಡಿದ.

'ಜತೇಲಿ ಓದಿದವರು' ಅಂತ ಮೊದಲನೇ ಪಟ್ಟಿ.

'ನಿಮ್ಮ ಶಾಮು' ಅಂತ ಮೊದಲು ಪ್ರಾರಂಭಿಸಿದಳು ಕಿಟ್ಟು ಆಕೆ.

'ನಮ್ಮ ಶಾಮು ತಾನೆ' ಅವನಿಗೆ ಬರೀ ಲಗ್ನಪತ್ರಿಕೆ ಬರೆದರೆ ಸಾಕೆ? ನಾವೇ ಹೋಗಿ ಸ್ವಂತ ಕರೆದು, ಲಗ್ನಪತ್ರಿಕೆ ಕೊಟ್ಟು ಬರಬೇಕು ಅಂದ ಕಿಟ್ಟು.

ಮಿಕ್ಕ ಹೆಸರುಗಳ ಪಟ್ಟಿ ತಯಾರಾದುವು.

'ಬಸವನಗುಡಿ' ಅಂತ ನಾಲ್ಕನೇ ಪ್ರಕರಣ. ಹೆದ್ದಾರಿ ಅಡ್ಡದಾರಿ ಅಂತ ಜ್ಞಾಪಿಸಿಕೊಂಡು ತಿಳಿದವರ ಹೆಸರನ್ನೆಲ್ಲಾ ಪಟ್ಟಿಮಾಡಿದರು. ನಾಲ್ಕನೇ ಅಡ್ಡದಾರಿ·

ಕಿಟ್ಟು ಮಗಳಂದಳು. ಅಲ್ಲೇ 'ಶಾಮು ಮಾವ' ಇರುವುದು.

"ನಮ್ಮ ಶಾಮು ತಾನೆ, ಅವನಿಗೆ ಖುದ್ದಾಗಿ ಕೊಡೋದು ಲಗ್ನಪತ್ರಿಕೆ" ಅಂತಂದ ಕಿಟ್ಟು.

* * *

"ನಮ್ಮ ಕಷ್ಟ ಕಾಲಕ್ಕೆ ಆದ ಸ್ನೇಹಿತರು" ಅಂತ ಎಂಟನೇ ಪಟ್ಟಿ. ನಮ್ಮ ಕಮಲಂಗೆ ಕೆಂಡಾ ಮಂಡಲ ಜ್ವರ ಬಂದಾಗ ಶಾಮು ಮತ್ತು ಅವನ ಹೆಂಡತಿ ಮೂರು ದಿನ ನಮ್ಮನೆಯಲ್ಲಿ ಇದ್ದು ಸುಧಾರಿಸಿದರಲ್ಲೇ! ಜ್ಞಾಪಕವಿದೆಯೇ ನಮ್ಮಪ್ಪನಾಗಲೀ

ನಿಮ್ಮಪ್ಪನಾಗಲೀ ಒಂದು ನಿಮಿಷ ಕೂಡ ಈ ಕಡೆ ತಿರುಗಲೇ ಇಲ್ಲ, ಹತ್ತು ವರ್ಷದ ಮಾತು ದಿಟ! ಆದರೆ ಮರೆಯಲಾಗುತ್ತ್ಯೆ" ಅಂದ ಕಿಟ್ಟು. ಕಣ್ಣನ್ನು ಒರೆಸಿ ಕೊಳ್ಳುತ್ತಾ.

ಅವನ ಹೆಂಡತಿ ಅಂದಳು. "ಅದು ಮರೆತರೂ ಕೂಡ, ನಾನು ಹೆರಿಗೆ ಆಸ್ಪತ್ರೆಯಲ್ಲಿ ಚಾಕು ಬೇಕೋ ಬೇಡವೋ ಎಂದು ಲೇಡಿ ಡಾಕ್ಟರು ಹದಿನಾರು ಗಂಟೆ ಲೆಕ್ಕ ಹಾಕುತ್ತಿದ್ದಾಗ, ನೀವು ಸರ್ಕೀಟ್ ಹೋಗಿದ್ದಾಗ, ನಮ್ಮಮ್ಮ ತಿರುಪತಿ ಯಾತ್ರೆಗೆ ಹೋಗಿದ್ದಾಗ, ಶಾಮು ಹೆಂಡತಿ, ಆಸ್ಪತ್ರೆ ವರಾಂಡಾದಲ್ಲಿ ಹದಿನಾರು ಗಂಟೆ ಛಳಿಯಲ್ಲಿ ಹೊಟ್ಟೆಗಿಲ್ಲದೆ ನಡುಗುತ್ತಾ ನನಗೆ ಧೈರ್ಯ ಹೇಳಿದಳಲ್ಲಾ" ಅಂತ ಬಿಕ್ಕಿ ಬಿಕ್ಕಿ ಅತ್ತಳು. ಮುಂದೆ ಮಾತೇ ಹೊರಡಲಿಲ್ಲ. "ಯಾವ ಜನ್ಮದ ಋಣವೋ! ನನ್ನ ತಮ್ಮ, ನಾದಿನಿಯಾಗಿ, ನಮ್ಮ ಜೀವನಕ್ಕೇ ಬೆಳಕು ಕೊಟ್ಟವರು ಅವರು. ಅವರಿಗೆ ಬರೀ ಲಗ್ನಪತ್ರಿಕೆ ಕಳಿಸೋದೇ! ನಾವೇ ಹೋಗಿ ಕರೆಯೋ ದಲ್ಲವೇ!"

"ನಮ್ಮ ಶಾಮೂ ತಾನೇ!" ಅಂದ ಕಿಟ್ಟು.

* * *

"ನಮ್ಮ ಭಾಗ್ಯಕ್ಕೆ ದೇವರ ರೂಪಿಗಳು" ಅಂತ ಹತ್ತನೆಯ ಪಟ್ಟಿ.

"ನಮ್ಮ ಮನೆ ಪುರೋಹಿತರು" ಅಂದಳು ಕಮಲಾ. "ಎಂಥಾ ಜ್ಞಾನಿ ಗಳಮ್ಮಾ ಅವರು! ಎಷ್ಟು ಓದಿದವರು!! ಅವರನ್ನ ಕಂಡಾಗಲೆಲ್ಲಾ ಕಾಲಿಗೆ ಬಿದ್ದು ನಮಸ್ಕಾರ ಮಾಡೋಣ ಅನ್ನಿಸುತ್ತೆ" ಅಂತ.

"ನಮ್ಮ ಡಾಕ್ಟರಮ್ಮಾ! ನನಗೆ ಹೊಟ್ಟೆನೋವು ಬಂದಾಗ ಸತ್ತರೆ ವಾಶಿ ಅಂದಾಗ, ನೀವಿಬ್ಬರೂ ಕಣ್ಣು ಹನಿಹಾಕುತ್ತಾ ನಿಂತಾಗ, ಅವರಲ್ಲವೇ ಅಪ್ಪಾ! ಬಂದು ನನ್ನ ನೋವು ಕಡಿಮೆಮಾಡಿ, ನಿಮ್ಮ ಕಣ್ಣಲ್ಲಿ ಅವರ ಮಾತಿನಿಂದ ನಗು ಬರಿಸಿ, ನನಗೆ ಚಪ್ಪರಿಸಲು ಪೆಂಪರ್‌ಮಿಂಟ್ ಕೊಟ್ಟು ಮಾಯವಾದರಲ್ಲಾ! ಅವರೇ ದೇವರ ರೂಪಿ" ಅಂದಳು ಲೀಲಾ.

"ಪುರೋಹಿತರು ಹೇಳಿದ್ದು ಜ್ಞಾಪಕ ಇದೆಯೇ! ಶಾಮೂ ಮಾಮನೇ ನಮ್ಮ ಮನೆಗೆ ದೇವರು ಅಂತಾ! ಆ ಡಾಕ್ಟರಂದಿದ್ದು ಮರೆತುಹೋಯಿತೇ ಶಾಮು ಮಾವನೇ ಲೀಲನ ಹೊಟ್ಟೆನೋವು ಕಡಿಮೆ ಮಾಡಿದವನು, ತನ್ನ ಮಾತಿನಿಂದ, ಅಂತಾ! ಶಾಮು ಮಾವನೇ ನಮ್ಮ ಭಾಗಕ್ಕೆ ದೇವರ ರೂಪಿ" ಅಂತಂದ ಪ್ರಸಾದ್.

"ಶಾಮು ಮಾವ ನನಗೆ ಪೆನ್ಸಿಲ್ ಕೊಟ್ಟ" ಅಂತ ಲೊಚಗುಟ್ಟಿದ ಬಚ್ಚ.

"ನಮ್ಮ ಶಾಮು ತಾನೇ" ಅಂದ ಕಿಟ್ಟು.

* * *

ಮದುವೆ ಹಿಂದಿನ ದಿವಸ ವಾಲಗದವ ಹೊತ್ತಿಗೆ ಸರಿಯಾಗಿ ಬರಲಿಲ್ಲ. ಮದುವೆ ದಿನ ಪುರೋಹಿತ ಸರಿಯಾದ ಹೊತ್ತಿಗೆ ಬರಲಿಲ್ಲ. ಮುಂದಿನ ದಿನ ಅಳಿಯ ಹೊತ್ತಿಗೆ ಸರಿಯಾಗಿ ಬರಲಿಲ್ಲ. ಈ ಗಲಾಟೆಯಲ್ಲಿ ಕಿಟ್ಟು ಅವನ ಸಂಸಾರ ಸುಸ್ತಾಗಿದ್ದರು.

ಪುರೋಹತ ವಾದ್ಯದವ, ದಶಮಗ್ರಹ ಈ ಗಲಾಟೆಯಲ್ಲಿ ಕಿಟ್ಟುಮನಸ್ಸು ತಳಮಳಿಸಿದ್ದು ಏನಾಶ್ಚರ್ಯ! ಮನಕೆಟ್ಟವನಿಗೆ ಶಾಮು ಜ್ಞಾಪಕ ಬಾರದಿದ್ದುದು ಏನಾಶ್ಚರ್ಯ!!

ಒಂದು ತಿಂಗಳನಂತರ ಯಾರೋ ಕಿಟ್ಟೂಗೆ ಹೇಳಿದರು. "ಶಾಮು ಬಸವನ ಗುಡಿಯಲ್ಲಿ ಖಾಯಿಲೆ" ಅಂತ. ಮಂಕು ಬಡಿದವನಂತೆ ಕಿಟ್ಟು ಅಲ್ಲಿಗೆ ಓಡಿದ. ಕಿಟ್ಟೂಗೆ ಗಡುವಿನ ಜ್ವರ. ಮರು ಕಳಿಸಿದ ಜ್ವರ. ಸ್ವಲ್ಪ ಸನ್ನಿ. ಶಾಮುವನ್ನು ಕಂಡ ಕೂಡಲೇ "ಅಲ್ಲಾ! ಮಿತ್ರ! ಊರಿಗೆಲ್ಲಾ ತೆಂಗಿನಕಾಯಿ ಹಂಚಿದೆ. ನನಗೊಂದು ಕೊಟ್ಟಿದ್ದರೆ ನಿನಗೇನು ಕಷ್ಟ ಆಗುತ್ತಿತ್ತು! ಅಂತ ಕನವರಿಸಿದ. ಕಿಟ್ಟುವಿಗೆ ಮಾತೇ ಹೊರಡದು. "ನಾನೇನೊ ಗಂಡಸು! ಅರ್ಥವಾಗುತ್ತೆ!! ಆದರೆ ನನ್ನ ಹೆಂಡತಿ, ಬಲು ನೊಂದುಕೊಂಡಳು ನಮ್ಮ ಅಣ್ಣ ಅತ್ತಿಗೆ ಹಾಗಿದ್ದರು:—ಕಿಟ್ಟು ಅವನ ಹೆಂಡತಿ :—ಅವರ ಮಗಳಿಗೆ ಮದುವೆ ಆದರೆ ನಮಗೆ ಒಂದು ಲಗ್ನಪತ್ರಿಕೇನೂ ಬೇಡವೇ" ಅಂತ ಕೊರಗಿದಳು. ಹೀಗೆ ಮಾಡ್ಬಹುದೇ ಕಿಟ್ಟು" ಅಂತಂದ.

ಕಿಟ್ಟು ಹೆಂಡತಿ ಹೇಳಿದಳು ಶಾಮುವಿಗೆ ಸನ್ನಿ ಅವರಂದಿದ್ದನ್ನು ಮನಸ್ಸಿಗೆ ತರಬೇಡಿ ಅಂತ.

ಶಾಮುವೇನೋ ಹುಷಾರಾದ. ಡಾಕ್ಟರು, ಔಷಧಿ, ದೇವರು ಎಲ್ಲಾ ಸೇರಿ ಕಷ್ಟ ನೀಗಿಸಿದರು.

ಆದರೆ ಶಾಮು ಪೆಚ್ಚಾದ. "ನಮ್ಮ ಶಾಮು ತಾನೇ" ಅಂತ ಅವನಿಗೆ ವಿಶೇಷ ಪ್ರಾಧಾನ್ಯವಿತ್ತ ಕಿಟ್ಟು, ಜೀವನದಹಾದಿಯ ಪರಿಚಿತರಿಗೆ ಮಾಡಿದ ಮರ್ಯಾದೆಯನ್ನೂ ಅವನಿಗೆ ಮಾಡಲಿಲ್ಲವಲ್ಲಾ" ಅನ್ನುವ ಕೊರಗು ಶಾಮುವಿನ ಜೀವಕ್ಕೇ ಅಂಟಿತು.

* * *

ಇದು ಯಾವುದೇ ಸತ್ಯವಾನ್ ಚಿತ್ರ ಕಂಡೇ ಇತ್ತಿಲ್ಲ ಎಂದ ಕಿಟ್ಟು.

"ಮರು ಉತ್ತರವಿಲ್ಲ."

ಆ ಪಟದ ಕೆಳಗೆ ಒಂದು ಸಣ್ಣ ಕಾಗದವಿತ್ತು. ಕಿಟ್ಟು ಮಗಳೂ ಅಳಿಯ ಸಾವಿತ್ರಿ ಸತ್ಯವಾನರಂತೆ ಕಷ್ಟದಲ್ಲಿ ಒಂದಾಗಿ ಜೀವನನಡೆಸಲಿ ಎಂದು. ಆ ಪಟವನ್ನು ಶಾಮು ಮದು ಮಕ್ಕಳಿಗೆ ಆಶೀರ್ವದಿಸಿ ಕಳಿಸಿದ್ದ, ಧಾರೆಯದಿನ.

—ಕಿಟ್ಟು.



---

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಕೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯೆನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು. ಒಪ್ಪಿದ ಲೇಖನಗಳಿಗೆ ಪ್ರತ್ಯುತ್ತರ ಉಂಟು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ೨.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೩—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೪—೦**

---

**ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ, ಬಹಳ ಸಹಾಯ ಮಾಡಿದಂತಾಗುವುದು.**



# "ಇದು ನಿಜ...
## ... ನೀವು ಲಕ್ಸ್ ಟಾಯಿಲೆಟ್ ಸೋಪಿನಿಂದ ಹೆಚ್ಚು ಸುಂದರರಾಗಬಹುದು"

ಎಂದು *ಸುಶೀಲ* ಹೇಳುತ್ತಾಳೆ




ನಿಜವಾಗಿಯೂ ಪರಿಣಾಮಕಾರಿಯಾದ ಸೌಂದರ್ಯೋಪಚಾರವಿದು !
"ಸುವಾಸನೆಯುಳ್ಳ ಕೆನೆಯಂತಹ ಲಕ್ಸ್ ಟಾಯಿಲೆಟ್ ಸೋಪಿನ ನೊರೆಯನ್ನು ಚರ್ಮಗತವಾಗುವಂತೆ ಚೆನ್ನಾಗಿ ತಿಕ್ಕುತ್ತೇನೆ ತೊಳೆದನಂತರ ಮೃದುವಾದ ಟವೆಲ್ಲಿನಿಂದ ಒತ್ತಿದ ಮೇಲೆ ನನ್ನ ಚರ್ಮಕ್ಕೆ ಒಂದು ಹೊಸ ಸೌಂದರ್ಯಬಂದಿರುತ್ತದೆ," ಎಂದು ಸುಶೀಲ ಹೇಳುತ್ತಾಳೆ.

## ಲಕ್ಸ್ ಟಾಯಿಲೆಟ್ ಸೋಪು

ಸಿನೆಮ ತಾರೆಯರ
ಸೌಂದರ್ಯದ ಸೋಪು

LTS. 367-50 KN

